| | | | Sums not exceeding | | |
|---|---|---|---|---|---|
| Demand No. | Service & Purpose | | voted by the Legislative Assembly | Charged on the consoli dated Fund | Total |
| 1 | 2 | | 3 | 4 | 5 |
| 09 | Co-operation | Revenue | 2,08,113.69 | ... | 2,08,113.69 |
| | | Capital | 4,490.00 | ... | 4,490.00 |
| 10 | Social Welfare | Revenue | 4,69,025.20 | ... | 4,69,025.20 |
| | | Capital | 35,533.17 | ... | 35,533.17 |
| 11 | Women and Child Development | Revenue | 3,33,001.70 | ... | 3,33,001.70 |
| | | Capital | 13,665.00 | ... | 13,665.00 |
| 12 | Information, Tourism and Youth Services | Revenue | 29,985.32 | ... | 29,985.32 |
| | | Capital | 27,330.52 | ... | 27,330.52 |
| 13 | Food and Civil Supplies | Revenue | 3,51,042.29 | 2.92 | 3,51,045.21 |
| | | Capital | 255.00 | ... | 255.00 |
| 14 | Revenue | Revenue | 3,98,789.55 | 3,000.00 | 4,01,789.55 |
| | | Capital | 8,286.28 | ... | 8,286.28 |
| 15 | Information Technology | Revenue | 18,212.75 | ... | 18,212.75 |
| | | Capital | 1,250.00 | ... | 1,250.00 |
| 16 | Housing | Revenue | 1,47,816.19 | ... | 1,47,816.19 |
| | | Capital | ... | ... | ... |
| 17 | Education | Revenue | 18,52,067.19 | ... | 18,52,067.19 |
| | | Capital | 47,071.00 | ... | 47,071.00 |
| 18 | Commerce and Industries | Revenue | 66,631.04 | ... | 66,631.04 |
| | | Capital | 21,914.52 | ... | 21,914.52 |
| 19 | Urban Development | Revenue | 7,19,163.50 | ... | 7,19,163.50 |
| | | Capital | 1,12,700.00 | ... | 1,12,700.00 |
| 20 | Public Works | Revenue | 2,26,690.24 | ... | 2,26,690.24 |
| | | Capital | 4,27,256.09 | ... | 4,27,256.09 |
| 21 | Water Resources | Revenue | 1,03,377.47 | ... | 1,03,377.47 |
| | | Capital | 7,57,664.71 | ... | 7,57,664.71 |
| 22 | Health and Family Welfare | Revenue | 5,11,198.82 | ... | 5,11,198.82 |
| | | Capital | 34,909.00 | ... | 34,909.00 |
| 23 | Labour | Revenue | 56,431.43 | ... | 56,431.43 |
| | | Capital | 2,400.00 | ... | 2,400.00 |
| 24 | Energy | Revenue | 5,29,201.27 | 300.00 | 5,29,501.27 |
| | | Capital | 1,15,080.00 | ... | 1,15,080.00 |
| 25 | Kannada and Culture | Revenue | 25,766.37 | ... | 25,766.37 |
| | | Capital | 550.00 | ... | 550.00 |
| 26 | Planning, Statistics, Science and Technology | Revenue | 23,609.38 | ... | 23,609.38 |
| | | Capital | 32,620.00 | ... | 32,620.00 |
| 27 | Law | Revenue | 58,430.21 | ... | 58,430.21 |
| | | Capital | 1,000.00 | ... | 1,000.00 |
| 28 | Parliamentary Affairs and Legislation | Revenue | 14,614.52 | 285.97 | 14,900.49 |
| | | | ... | 8,50,000.00 | 8,50,000.00 |
| 29 | Debt Servicing | Revenue | ... | 5,84,042.00 | 5,84,042.00 |
| | | Capital | | | |
| | **Total** | | **11,013,702.65** | **1,497,889.54** | **12,511,592.19** |

**STATEMENT OF OBJECTS AND REASONS**

This Bill is introduced in pursuance of the provisions of Article 204 of the Constitution of India to provide for the appropriation out of the Consolidated Fund of the State towards defraying the several charges which will come in course of payment during the Financial Year 2013-14.

**SIDDARAMAIAH**
Chief Minister and
Minister for Finance

**P. OMPRAKASHA**
Secretary
Karnataka Legislative Assembly


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೩೦, ೨೦೧೩ (ಶ್ರಾವಣ ೮, ಶಕ ವರ್ಷ ೧೯೩೫) | ನಂ.೯೯೭ |
| **Part – IV-A** | **Bangalore, Tuesday, July 30, 2013 (Shravana 8, Shaka Varsha 1935)** | **No. 997** |


## KARNATAKA LEGISLATIVE ASSEMBLY SECRETARIAT

### NOTIFICATION

**No. KLA/LGA/07/LA Bill/2013, Bangalore, Dated: 30-07-2013**

The following Bill was introduced in Legislative Assembly on 30-7-2013

## ಕರ್ನಾಟಕ ವಿಧಾನ ಸಭೆ

### ಹದಿನಾಲ್ಕನೇ ವಿಧಾನ ಸಭೆ

### ಮೊದಲನೇ ಅಧಿವೇಶನದ ಮುಂದುವರೆದ ಉಪವೇಶನ

## ಕರ್ನಾಟಕ ತೆರಿಗೆ ಕಾನೂನುಗಳ (ಎರಡನೇ ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನಸಭೆಯ ವಿಧೇಯಕ ಸಂಖ್ಯೆ–07)**

ಕರ್ನಾಟಕ ರಾಜ್ಯದಲ್ಲಿ ಜಾರಿಯಲ್ಲಿರುವ ಕೆಲವು ತೆರಿಗೆ ಕಾನೂನುಗಳನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕೆಲವು ತೆರಿಗೆ ಕಾನೂನುಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ತೆರಿಗೆ ಕಾನೂನುಗಳ (ಎರಡನೇ ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು 2013ರ ಆಗಸ್ಟ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 1957ರ ಕರ್ನಾಟಕ ಅಧಿನಿಯಮ 25ರ ತಿದ್ದುಪಡಿ.–** ಕರ್ನಾಟಕ ಮಾರಾಟಗಳ ತೆರಿಗೆ ಅಧಿನಿಯಮ, 1957ರಲ್ಲಿ (1957ರ ಕರ್ನಾಟಕ ಅಧಿನಿಯಮ 25) 4ನೇ ಪ್ರಕರಣದ (12)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(13) ಯಾವುದೇ ನಿರ್ದಿಷ್ಟ ಸರಕುಗಳಿಗೆ ಸಂಬಂಧಿಸಿದಂತೆ (7)ನೇ ಉಪಪ್ರಕರಣದ ಅಡಿಯಲ್ಲಿ 'ಸ್ಪಷ್ಟೀಕರಣ ಮತ್ತು ಪೂರ್ವಭಾವಿ ನಿರ್ಣಯ ಪ್ರಾಧಿಕಾರವು' ನೀಡಿದ ಯಾವುದೇ ಸ್ಪಷ್ಟೀಕರಣ ಅಥವಾ ನಿರ್ಣಯದಲ್ಲಿ ಏನೇ ಇದ್ದರೂ, ಅರ್ಜಿದಾರನು ಅಂಥ ಸರಕುಗಳಿಗೆ ಸಂಬಂಧಿಸಿದಂತೆ ಸಂದಾಯ ಮಾಡಬೇಕಾದ ತೆರಿಗೆಯ ದರವು, ಆಯುಕ್ತನು 3–ಎ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ಸ್ಪಷ್ಟೀಕರಿಸಬಹುದಾದಂತಹ ದರದಲ್ಲಿ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ, ಇರತಕ್ಕದ್ದು."

**3. 1958ರ ಕರ್ನಾಟಕ ಅಧಿನಿಯಮ 30ರ ತಿದ್ದುಪಡಿ.–** ಕರ್ನಾಟಕ ಮನೋರಂಜನೆಗಳ ತೆರಿಗೆ ಅಧಿನಿಯಮ, 1958ರ (1958ರ ಕರ್ನಾಟಕ ಅಧಿನಿಯಮ 30) 4–ಎಎ ಪ್ರಕರಣದ ಕೋಷ್ಟಕದಲ್ಲಿ,

(i) (ಎ) ಕ್ರಮಸಂಖ್ಯೆಗೆ ಸಂಬಂಧಿಸಿದ ನಮೂದುಗಳಲ್ಲಿ, (3)ನೇ ಅಂಕಣದಲ್ಲಿ "ಒಂದು ರೂಪಾಯಿ ಮತ್ತು ಐವತ್ತು ಪೈಸೆಯ" ಎಂಬ ಪದಗಳಿಗೆ "ಮೂರು ರೂಪಾಯಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (ಬಿ) ಕ್ರಮಸಂಖ್ಯೆಗೆ ಸಂಬಂಧಿಸಿದ ನಮೂದುಗಳಲ್ಲಿ, (3)ನೇ ಅಂಕಣದಲ್ಲಿ "ಒಂದು ರೂಪಾಯಿಯ" ಎಂಬ ಪದಗಳಿಗೆ "ಎರಡು ರೂಪಾಯಿಗಳ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 1976ರ ಕರ್ನಾಟಕ ಅಧಿನಿಯಮ 35ರ ತಿದ್ದುಪಡಿ.–** ಕರ್ನಾಟಕ ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ 35) ಅನುಸೂಚಿಯಲ್ಲಿ 4ನೇ ಕ್ರಮಸಂಖ್ಯೆಗೆ ಸಂಬಂಧಿಸಿದ ನಮೂದುಗಳಲ್ಲಿ, (2)ನೇ ಅಂಕಣದಲ್ಲಿ "36,000 ರೂಪಾಯಿಗಳಿಗೆ" ಎಂಬ ಅಂಕಿಗಳು ಮತ್ತು ಪದ ಬರುವ ಎರಡು ಕಡೆಗಳಲ್ಲಿ "1,20,000 ರೂಪಾಯಿಗಳಿಗೆ" ಎಂಬ ಅಂಕಿಗಳು ಮತ್ತು ಪದವನ್ನು ಅನುಕ್ರಮವಾಗಿ ಪ್ರತಿಯೋಜಿಸತಕ್ಕದ್ದು.

**5. 1979ರ ಕರ್ನಾಟಕ ಅಧಿನಿಯಮ 27ರ ತಿದ್ದುಪಡಿ.–** ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979ರ (1979ರ ಕರ್ನಾಟಕ ಅಧಿನಿಯಮ 27) 12–ಸಿ ಪ್ರಕರಣದ (2)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಯಾವುದೇ ನಿರ್ದಿಷ್ಟ ಸರಕುಗಳಿಗೆ ಸಂಬಂಧಿಸಿದಂತೆ (1)ನೇ ಉಪಪ್ರಕರಣದ ಅಡಿಯಲ್ಲಿ 'ಸ್ಪಷ್ಟೀಕರಣ ಮತ್ತು ಪೂರ್ವಭಾವಿ ನಿರ್ಣಯ ಪ್ರಾಧಿಕಾರವು' ನೀಡಿದ ಯಾವುದೇ ಸ್ಪಷ್ಟೀಕರಣ ಅಥವಾ ನಿರ್ಣಯದಲ್ಲಿ ಏನೇ ಇದ್ದರೂ, ಅರ್ಜಿದಾರನು ಅಂಥ ಸರಕುಗಳಿಗೆ ಸಂಬಂಧಿಸಿದಂತೆ ಸಂದಾಯ ಮಾಡಬೇಕಾದ ತೆರಿಗೆಯ ದರವು, ಆಯುಕ್ತನು 12ನೇ ಪ್ರಕರಣದ (7)ನೇ ಉಪಪ್ರಕರಣದ ಅಡಿಯಲ್ಲಿ ಸ್ಪಷ್ಟೀಕರಿಸಬಹುದಾದಂತಹ ದರದಲ್ಲಿ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ, ಅಂಥ ಇರತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಜಾರಿಗೊಳಿಸಲು ಮತ್ತು ಅವುಗಳಿಗೆ ಸಂಬಂಧಿಸಿದ ಹಾಗೂ ಪ್ರಾಸಂಗಿಕವಾದ ವಿಷಯಗಳಿಗಾಗಿ ಮತ್ತು ವಿಶೇಷವಾಗಿ ಕರ್ನಾಟಕ ಮಾರಾಟಗಳ ತೆರಿಗೆ ಅಧಿನಿಯಮ, 1957ರ ಅಥವಾ ಕರ್ನಾಟಕ ಸರಕುಗಳ ಪ್ರವೇಶದ ಮೇಲಣ ತೆರಿಗೆ ಅಧಿನಿಯಮ, 1979ರ ಅಡಿಯಲ್ಲಿ ವಾಣಿಜ್ಯ ತೆರಿಗೆಗಳ ಆಯುಕ್ತನು ಹೊರಡಿಸಿದ ಯಾವುದೇ ಸ್ಪಷ್ಟೀಕರಣವು ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳ ಪ್ರಾಧಿಕಾರದ ಸ್ಪಷ್ಟೀಕರಣಕ್ಕೆ ಅಧ್ಯಾರೋಹಿಯಾಗಿರತಕ್ಕದ್ದು ಎಂದು ನಿರ್ದಿಷ್ಟಪಡಿಸಲು, ಕರ್ನಾಟಕ ಮಾರಾಟಗಳ ತೆರಿಗೆ ಅಧಿನಿಯಮ, 1957, ಕರ್ನಾಟಕ ಮನೋರಂಜನೆಗಳ ತೆರಿಗೆ ಅಧಿನಿಯಮ, 1958, ಕರ್ನಾಟಕ ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976 ಮತ್ತು ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979 ಇವುಗಳನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಕೆಲವು ಆನುಷಂಗಿಕ ಮತ್ತು ಪ್ರಾಸಂಗಿಕವಾದ ತಿದ್ದುಪಡಿಗಳನ್ನು ಸಹಾ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಸಿದ್ದರಾಮಯ್ಯ**
ಮುಖ್ಯಮಂತ್ರಿ

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ತೆರಿಗೆ ಕಾನೂನುಗಳ (ಎರಡನೇ ತಿದ್ದುಪಡಿ) ವಿಧೇಯಕ, 2013

## ಕರ್ನಾಟಕ ಮಾರಾಟಗಳ ತೆರಿಗೆ ಅಧಿನಿಯಮ (1957ರ ಕರ್ನಾಟಕ ಅಧಿನಿಯಮ 25) ಉದ್ಧೃತ ಭಾಗ

xx xx xx

**4. ಸ್ಪಷ್ಟೀಕರಣಕ್ಕಾಗಿ ಮತ್ತು ಪೂರ್ವಭಾವಿ ನಿರ್ಣಯಗಳಿಗಾಗಿ ಉಪಬಂಧ.–** (1) ಆಯುಕ್ತನು, ಸ್ಪಷ್ಟೀಕರಣ ಮತ್ತು ಪೂರ್ವಭಾವಿ ನಿರ್ಣಯಗಳಿಗಾಗಿ ಮೂವರು ಅಪರ ಆಯುಕ್ತರಿರುವ ಒಂದು ರಾಜ್ಯ ಮಟ್ಟದ ಪ್ರಾಧಿಕಾರವನ್ನು (ಇಲ್ಲಿ ಇನ್ನು ಮುಂದೆ ಪ್ರಾಧಿಕಾರವೆಂದು ಉಲ್ಲೇಖಿಸಲಾಗಿದೆ) ಈ ಅಧಿನಿಯಮದ ಅಡಿಯಲ್ಲಿ ತೆರಿಗೆಗೆ ಗುರಿಯಾದ ಯಾವುದೇ ಸರಕುಗಳ ಸಂಬಂಧದಲ್ಲಿ ಅಥವಾ ನೋಂದಾಯಿತನಾದ ಒಬ್ಬ ಡೀಲರನು ಸಲ್ಲಿಸಿದ ಅರ್ಜಿಯ ಮೇಲೆ ಈ ಅಧಿನಿಯಮದ ಅಡಿಯಲ್ಲಿ ತೆರಿಗೆಗಾಗಿನ ಯಾವುದೇ ವ್ಯವಹಾರದ ಬಲವಂತದ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಅನ್ವಯವಾಗತಕ್ಕ ತೆರಿಗೆಯ ದರ ಸ್ಪಷ್ಟೀಕರಿಸಲು ರಚಿಸಬಹುದು.

xx xx xx

(7) (5)ನೇ ಉಪಪ್ರಕರಣದ ಅಡಿಯಲ್ಲಿ ಒಂದು ಅರ್ಜಿಯನ್ನು ಅಂಗೀಕರಿಸಿದಲ್ಲಿ ಪ್ರಾಧಿಕಾರವು, ಅರ್ಜಿದಾರನು ಪ್ರಾಧಿಕಾರದ ಮುಂದೆ ಮಂಡಿಸಬಹುದಾದ ಅಥವಾ ಪ್ರಾಧಿಕಾರದಿಂದ ಪಡೆದುಕೊಂಡ ಅಂಥ ಹೆಚ್ಚಿನ ವಾಸ್ತವಾಂಶಗಳನ್ನು ಪರೀಕ್ಷಿಸಿದ ತರುವಾಯ, ಅರ್ಜಿದಾರನಿಗೆ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಡಬೇಕೆಂದು ಅವನು ಇಚ್ಛಿಸಿದರೆ ಮತ್ತು ಸಂಬಂಧಪಟ್ಟ ತೆರಿಗೆ ನಿರ್ಧರಣೆ ಪ್ರಾಧಿಕಾರಿ ಅಥವಾ ನೋಂದಣಿ ಪ್ರಾಧಿಕಾರಿಗೆ ಹಾಗೆ ಅವಕಾಶ ಕೊಟ್ಟ ತರುವಾಯ, ಅರ್ಜಿಯಲ್ಲಿ ನಿರ್ದಿಷ್ಟಪಡಿಸಿದ ಪ್ರಶ್ನೆಗಳ ಮೇಲೆ ತಾನು ಸೂಕ್ತವೆಂದು ಭಾವಿಸುವಂಥ ಆದೇಶವನ್ನು ಮಾಡಬಹುದು. ಪ್ರಾಧಿಕಾರವು ಯಾವುದೇ ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ತೊಂಭತ್ತು ದಿನಗಳೊಳಗೆ ಆದೇಶವನ್ನು ಮಾಡತಕ್ಕದ್ದು ಮತ್ತು ಅಂಥ ಆದೇಶದ ಒಂದು ಪ್ರತಿಯನ್ನು ಅರ್ಜಿದಾರರನಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸತಕ್ಕದ್ದು.

xx xx xx

(10) (7)ನೇ ಉಪಪ್ರಕರಣದ ಅಡಿಯಲ್ಲಿ ಪ್ರಾಧಿಕಾರದ ಆದೇಶವು, ಆದೇಶವನ್ನು ಯಾವ ಕಾನೂನು ಅಥವಾ ವಾಸ್ತವಾಂಶಗಳ ಆಧಾರದ ಮೇಲೆ ಹೊರಡಿಸಲಾಗಿದೆಯೋ, ಅವುಗಳಲ್ಲಿ ಬದಲಾವಣೆ ಇದ್ದ ಹೊರತು, ಮೇಲ್ಕಂಡಂತೆ ಬಂಧಕವಾಗಿರತಕ್ಕದ್ದು.

(11) ಪ್ರಾಧಿಕಾರವು, ತಾನು ಹೊರಡಿಸಿದ ಆದೇಶವನ್ನು ಅರ್ಜಿದಾರನು ಮೋಸದಿಂದ ಅಥವಾ ವಾಸ್ತವಾಂಶಗಳನ್ನು ಮೂಲಕ ತಿರುಚುವ ಆದೇಶವನ್ನು ಪಡೆದುಕೊಂಡಿದ್ದಾನೆಂದು, ಯಾವೊಬ್ಬ ಅಧಿಕಾರಿಯು ಸಲ್ಲಿಸಿದ ಮನವಿಯ ಮೇಲೆ ಅಥವಾ ಅನ್ಯಥಾ ಕಂಡುಬಂದರೆ, ಅದು, ಆದೇಶದ ಮೂಲಕ ಅಂಥ ಆದೇಶವು ಪ್ರಾರಂಭದಿಂದಲೇ ಶೂನ್ಯವೆಂದು ಘೋಷಿಸಬಹುದು ಮತ್ತು ಆ ತರುವಾಯ ಅಂಥ ಆದೇಶವನ್ನು ಮಾಡಲಾಗಿರದಿದ್ದರೆ ಹೇಗೋ ಹಾಗೆ ಈ ಅಧಿನಿಯಮದ ಎಲ್ಲಾ ಉಪಬಂಧಗಳು ಅರ್ಜಿದಾರನಿಗೆ ಅನ್ವಯವಾಗತಕ್ಕದ್ದು.

(12) (11)ನೇ ಉಪಪ್ರಕರಣದ ಅಡಿಯಲ್ಲಿ ಮಾಡಿದ ಆದೇಶದ ಪ್ರತಿಯನ್ನು, ಅರ್ಜಿದಾರನಿಗೆ ಮತ್ತು ಆಯುಕ್ತನಿಗೆ ಅಥವಾ ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸತಕ್ಕದ್ದು.

xx xx xx

**ಕರ್ನಾಟಕ ಮನೋರಂಜನೆಗಳ ತೆರಿಗೆ ಅಧಿನಿಯಮ, 1958ರ (1958ರ ಕರ್ನಾಟಕ ಅಧಿನಿಯಮ 30) ಉದ್ಧೃತ ಭಾಗ**

xx xx xx

**4ಎಎ. ಸೇವಾ ವೆಚ್ಚಗಳ ಸಂಗ್ರಹಣೆ.– 3**–ಎ ಅಥವಾ 4–ಎ ಪ್ರಕರಣದಡಿಯಲ್ಲಿ ಚಲನಚಿತ್ರದ ಪ್ರದರ್ಶನದ ಮೇಲೆ ತೆರಿಗೆ ಸಂದಾಯ ಮಾಡುತ್ತಿರುವ ಪ್ರತಿಯೊಂದು ಚಿತ್ರಮಂದಿರದ ಮಾಲೀಕನು ನಿಯಮಿಸಲಾದ ಅಂಥ ನಿಯಮಗಳಿಗೆ ಒಳಪಟ್ಟು ಈ ಕೆಳಗಿನ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಿರುವ ಮೊಬಲಗಿಗೆ ಮೀರದ ಮೊಬಲಗನ್ನು ಸೇವಾ ವೆಚ್ಚವೆಂಬಂತೆ ಸಂಗ್ರಹಣೆ ಮಾಡಬಹುದು, ಎಂದರೆ:–

**ಕೋಷ್ಟಕ**

| ಕ್ರಮ ಸಂಖ್ಯೆ | ಚಿತ್ರಮಂದಿರಗಳ ವರ್ಗೀಕರಣ | ಮೊಬಲಗು |
|---|---|---|
| (ಎ) | ಏರ್ ಕಂಡೀಷನ್ ಮತ್ತು ಏರ್ ಕೂಲ್ ವ್ಯವಸ್ಥೆ ಇರುವ ಚಿತ್ರಮಂದಿರಗಳು | ಪ್ರತಿಯೊಂದು ಪ್ರವೇಶಕ್ಕಾಗಿ ಮಾಡಲಾದ ಸಂದಾಯದ ಮೇಲೆ ಗರಿಷ್ಠ ಒಂದು ರೂಪಾಯಿ ಮತ್ತು ಐವತ್ತು ಪೈಸೆಯ ವರೆಗೆ |
| (ಬಿ) | ಸಂಚಾರಿ ಚಿತ್ರಮಂದಿರವನ್ನು ಹೊರತುಪಡಿಸಿ ಇತರ ಚಿತ್ರಮಂದಿರಗಳು | ಪ್ರತಿಯೊಂದು ಪ್ರವೇಶ ಸಂದಾಯದ ಮೇಲೆ ಗರಿಷ್ಠ ಒಂದು ರೂಪಾಯಿಯ ವರೆಗೆ |

xx xx xx

**ಕರ್ನಾಟಕ ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಣ ತೆರಿಗೆ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ 35) ಉದ್ಧೃತ ಭಾಗ**

xx xx xx

**ಅನುಸೂಚಿ**

**ವೃತ್ತಿಗಳ, ಕಸಬುಗಳ, ಆಜೀವಿಕೆಗಳ ಮತ್ತು ಉದ್ಯೋಗಗಳ ಮೇಲಿನ ತೆರಿಗೆಯ ದರಗಳು**

| ಕ್ರಮ ಸಂಖ್ಯೆ | ವ್ಯಕ್ತಿಗಳ ವರ್ಗ | ತೆರಿಗೆಯ ದರ |
|---|---|---|
| 1 | 2 | 3 |
| 1 | ಕೆಳಗಿನ ವರ್ಗಗಳಿಗೆ ಸೇರುವ ಸಂಬಳ ಅಥವಾ ಮಜೂರಿ ಪಡೆಯುವವರು,–<br>(ಎ) xx xx xx<br>(ಬಿ) xx xx xx<br>(ಸಿ) xx xx xx<br>(ಡಿ) ರೂ. 10000/– ಗಳಿಗಿಂತ ಕಡಿಮೆಯಲ್ಲದ ಆದರೆ ರೂ. 15000/– ಗಳಿಗಿಂತ ಕಡಿಮೆ<br>(ಇ) ರೂ. 15000/– ಮತ್ತು ಅದಕ್ಕಿಂತ ಹೆಚ್ಚು | <br><br>xxxx<br>xxxx<br>xxxx<br>ತಿಂಗಳಿಗೆ ರೂ. 150/–<br>ತಿಂಗಳಿಗೆ ರೂ. 200/– |

xx xx xx

| | | |
|---|---|---|
| 4 | (i) ವಿಮಾ ಅಧಿನಿಯಮ, 1938 (1938ರ ಕೇಂದ್ರ ಅಧಿನಿಯಮ IV) ಅಡಿಯಲ್ಲಿ ನೋಂದಾಯಿತರಾದ ಅಥವಾ ಲೈಸೆನ್ಸ್ ಅನ್ನು ಹೊಂದಿರುವ ವಾರ್ಷಿಕ ಆದಾಯವು 36,000 ರೂಪಾಯಿಗಳಿಗೆ ಕಡಿಮೆ ಇರುವ ಮುಖ್ಯ ಏಜೆಂಟರು, ಪ್ರಿನ್ಸಿಪಾಲ್ ಏಜೆಂಟರು, ಸ್ಪೆಷಲ್ ಏಜೆಂಟರು, ಇನ್ಸೂರೆನ್ಸ್ ಏಜೆಂಟರು ಮತ್ತು ಸರ್ವೆಯರುಗಳು ಅಥವಾ ಲಾಸ್ ಅಸೆಸರ್ಸ್.<br>(ii) ವಾರ್ಷಿಕ ಆದಾಯವು 36000 ರೂಪಾಯಿಗಳಿಗೆ ಕಡಿಮೆಯಿರುವ ಪಿಗ್ಮಿ ಏಜೆಂಟರು ಅಥವಾ ಯುಟಿಐ ಏಜೆಂಟರು | ಪ್ರತಿ ವರ್ಷಕ್ಕೆ ರೂ.1000 |
| | **ವಿವರಣೆ:** ಈ ಬಾಬಿನ ಉದ್ದೇಶಕ್ಕಾಗಿ, ಯಾವುದೇ ಹೆಸರಿನಿಂದ ಕರೆದಿರುವ, ಆದಾಯವನ್ನು, ಮುಖ್ಯ ಏಜೆಂಟರು, ಪ್ರಿನ್ಸಿಪಾಲ್ ಏಜೆಂಟರು, ಸ್ಪೆಷಲ್ ಏಜೆಂಟರು, ಇನ್ಸೂರೆನ್ಸ್ ಏಜೆಂಟರು ಮತ್ತು ಸರ್ವೆಯರುಗಳು ಅಥವಾ ಲಾಸ್ ಅಸೆಸರ್ಸ್ ಅಥವಾ ಪಿಗ್ಮಿ ಏಜೆಂಟರು ಅಥವಾ ಯುಟಿಐ ಏಜೆಂಟರು ಅಂಥ ವ್ಯಕ್ತಿಗಳು ಗಳಿಸಿದ, ಕಮೀಷನ್ ಅಥವಾ ಯಾವುದೇ ಇತರ ಗೌರವಧನ ಎಂದು ಭಾವಿಸತಕ್ಕದ್ದು. | |

**ಕರ್ನಾಟಕ ಸರಕುಗಳ ಪ್ರವೇಶದ ಮೇಲೆ ತೆರಿಗೆ ಅಧಿನಿಯಮ, 1979ರ**
**(1979ರ ಕರ್ನಾಟಕ ಅಧಿನಿಯಮ 27) ಉದ್ಧೃತ ಭಾಗ**

xx xx xx

**12ಸಿ. ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳು.–** (1) ಕರ್ನಾಟಕ ಮಾರಾಟ ತೆರಿಗೆ ಅಧಿನಿಯಮ, 1957ರ (1957ರ ಕರ್ನಾಟಕ ಅಧಿನಿಯಮ 25) (ಇಲ್ಲಿ ಇನ್ನು ಮುಂದೆ "ಸದರಿ ಅಧಿನಿಯಮ" ಎಂದು ಉಲ್ಲೇಖಿಸಲಾಗಿದೆ) 4ನೇ ಪ್ರಕರಣ ಅಡಿಯಲ್ಲಿ ರಚಿಸಲಾದ "ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳ ಪ್ರಾಧಿಕಾರ" (ಈ ಅಧಿನಿಯಮದಲ್ಲಿ ಇನ್ನು ಮುಂದೆ ಪ್ರಾಧಿಕಾರ ಎಂದು ಉಲ್ಲೇಖಿಸಲಾಗಿದೆ) ಯಾವುವೇ ಸರಕುಗಳ ಸಂಬಂಧದಲ್ಲಿ ತೆರಿಗೆಯ ದರದ ಬಗ್ಗೆ ಅಥವಾ ಯಾವುದೇ ವ್ಯವಹರಣೆಯಲ್ಲಿ ತೆರಿಗೆ ಬದ್ಧತೆಯ ಬಗ್ಗೆ, ಈ ಅಧಿನಿಯಮದ ಅಡಿಯಲ್ಲಿ ನೋಂದಾಯಿತನಾದ ವ್ಯಾಪಾರಿಯಿಂದ ಅರ್ಜಿಯನ್ನು ಸ್ವೀಕರಿಸಿದ ನಂತರ, ಈ ಅಧಿನಿಯಮದ ಅಡಿಯಲ್ಲಿ ಅನ್ವಯವಾಗುವ ತೆರಿಗೆಯ ದರಗಳ ಸ್ಪಷ್ಟೀಕರಣ ನೀಡಲು ಪ್ರಾಧಿಕರಿಸತಕ್ಕದ್ದು.

(2) ಅಪೀಲಿಗೆ ಸಂಬಂಧಿಸಿದ ಉಪಬಂಧಗಳು ಒಳಗೊಂಡಂತೆ ಸದರಿ ಅಧಿನಿಯಮದ ಎಲ್ಲಾ ಉಪಬಂಧಗಳು ಮತ್ತು ಸ್ಪಷ್ಟೀಕರಣವನ್ನು ನೀಡುವುದಕ್ಕಾಗಿ, ಶುಲ್ಕವನ್ನು ಪಾವತಿಸುವುದಕ್ಕಾಗಿ, ಪ್ರಾಧಿಕಾರವು ಹೊರಡಿಸಿದ ಆದೇಶದ ವಿಲೆ ಮತ್ತು ಅನುಷ್ಠಾನಕ್ಕಾಗಿ ಅರ್ಜಿಯನ್ನು ಸಲ್ಲಿಸುವ ರೀತಿಗೆ ಸಂಬಂಧಿಸಿದಂತೆ ಅದರಡಿಯಲ್ಲಿ ರಚಿಸಲಾದ ನಿಯಮಗಳು, ಈ ಉಪಪ್ರಕರಣಕ್ಕೆ ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

xx xx xx

(7) ಮೇಲೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯಕ್ಕೆ ಬಾಧಕವಾಗದಂತೆ, ಆಯುಕ್ತನು, ಕಂದಾಯದ ತೆರಿಗೆ ನಿರ್ಧರಣೆ ಮತ್ತು ಸಂಗ್ರಹಣೆಯ ಕಾರ್ಯದಲ್ಲಿ ಸಮಾನತೆಯನ್ನು ನಿರ್ವಹಿಸುವ ಉದ್ದೇಶಕ್ಕಾಗಿ ಅಥವಾ ಯಾವುದೇ ಸಂದೇಹವನ್ನು ನಿವಾರಿಸುವುದಕ್ಕಾಗಿ ಅವಶ್ಯವೆಂದು ಅಥವಾ ಹಾಗೆ ಮಾಡುವುದು ಯುಕ್ತವೆಂದು ತಾನು ಭಾವಿಸಿದಲ್ಲಿ, ತಾನಾಗಿಯೇ ಆಗಲಿ ಅಥವಾ ವ್ಯಾಪಾರಿಯ ಅರ್ಜಿಯ ಮೇಲಾಗಲಿ, ಈ ಅಧಿನಿಯಮದ ಅಡಿಯಲ್ಲಿ ತೆರಿಗೆ ಪಾವತಿಸಬೇಕಾದ ಸರಕುಗಳ ಸಂಬಂಧದಲ್ಲಿ ಈ ಅಧಿನಿಯಮದ ಅಡಿಯಲ್ಲಿ ಸಂದಾಯವಾಗಬೇಕಾದ ತೆರಿಗೆ ದರವನ್ನು ಅಥವಾ ಸಂದರ್ಭಾನುಸಾರವಾಗಿ ಸಂದೇಹವನ್ನು ಸ್ಪಷ್ಟೀಕರಿಸುವುದು ಮತ್ತು ಈ ಅಧಿನಿಯಮವನ್ನು ಜಾರಿಗೊಳಿಸುವಲ್ಲಿ ನಿಯೋಜಿತರಾದ ಎಲ್ಲಾ ಅಧಿಕಾರಿಗಳು ಮತ್ತು ವ್ಯಕ್ತಿಗಳು ಅಂತಹ ಸ್ಪಷ್ಟೀಕರಣವನ್ನು ಗಮನಿಸತಕ್ಕದ್ದು ಮತ್ತು ಅನುಸರಿಸತಕ್ಕದ್ದು:

ಪರಂತು, ನಿಯಮಿಸಬಹುದಾದಂಥ ರೀತಿಯಲ್ಲಿ ಅಂಥ ಶುಲ್ಕವನ್ನು ಪಾವತಿಸಿದ ಪಾವತಿ ರುಜುವಾತಿನ ಜೊತೆಯಲ್ಲಿಲ್ಲದ ಅಂಥ ಯಾವುದೇ ಅರ್ಜಿಯನ್ನು ಪುರಸ್ಕರಿಸತಕ್ಕದ್ದಲ್ಲ.

## KARNATAKA LEGISLATIVE ASSEMBLY
## FOURTEENTH LEGISLATIVE ASSEMBLY
## FIRST SESSION ADJOURNED MEETING

## THE KARNATAKA TAXATION LAWS (SECOND AMENDMENT) BILL, 2013
## (L.A. Bill No. 07 of 2013)

A Bill further to amend certain taxation laws in force in the State of Karnataka.

Whereas it is expedient further to amend certain taxation laws for the purposes hereinafter appearing;

Be it enacted by the Karnataka State Legislature in the Sixty Fourth year of the Republic of India, as follows.-

**1. Short title and commencement.-** (1) This Act may be called the Karnataka Taxation Laws (Second Amendment) Act, 2013.

(2) It shall come into force with effect from the First day of August, 2013.

**2. Amendment of Karnataka Act 25 of 1957.-** In the Karnataka Sales Tax Act, 1957 (Karnataka Act 25 of 1957), in section 4, after sub-section (12), the following shall be inserted, namely:-

"(13) Notwithstanding any clarification or any ruling given by the 'Authority for Clarification and Advance Rulings' under sub-section (7) pertaining to any particular goods, the rate of tax payable in respect of such goods by the applicant shall be at such rate as may be clarified by the Commissioner under sub-section (2) of section 3-A, from the date of its publication in the official Gazette."

**3. Amendment of Karnataka Act 30 of 1958.-** In the Karnataka Entertainments Tax Act, 1958 (Karnataka Act 30 of 1958), in section 4-AA, in the table,

(i) in the entries relating to serial number (a), in column (3), for the words "one rupee and fifty paise", the words "three rupees" shall be substituted;

(ii) in the entries relating to serial number (b), in column (3), for the words "one rupee", the words "two rupees" shall be substituted.

**4. Amendment of Karnataka Act 35 of 1976.-** In the Karnataka Tax on Professions, Trades, Callings and Employments Act, 1976 (Karnataka Act 35 of 1976), in the schedule, in the entries relating to serial number 4, in column (2), for the letters and figures "Rs.36,000", occurring in two places, the letters and figures "Rs.1,20,000" shall respectively be substituted.

**5. Amendment of Karnataka Act 27 of 1979.-** In the Karnataka Tax on Entry of Goods Act, 1979 (Karnataka Act 27 of 1979), in section 12-C, after sub-section (2), the following shall be inserted, namely:-

"(3) Notwithstanding any clarification or any ruling given by the 'Authority for Clarification and Advance Rulings' under sub-section (1) pertaining to any particular goods, the rate of tax payable in respect of such goods by the applicant shall be at such rate as may be clarified by the Commissioner under sub-section (7) of section 12, from the date of its publication in the official Gazette."

## STATEMENT OF OBJECTS AND REASONS

It is considered necessary to amend the Karnataka Sales Tax Act, 1957, the Karnataka Entertainments Tax Act, 1958, the Karnataka Tax on Professions, Trades, Callings and Employments Act, 1976 and the Karnataka Tax on Entry of Goods Act, 1979 to give effect to the proposals made in the Budget and matters connected therewith particularly to specify that any clarification issued by the Commissioner of Commercial Taxes under the Karnataka Sales Tax Act, 1957 or the Karnataka Tax on Entry of Goods Act, 1979 overrides the clarification of the Authority for Clarification and Advance Rulings.

Certain consequential and incidental amendments are also made.

Hence the Bill.

## FINANCIAL MEMORANDUM

There is no extra expenditure involved in the proposed legislative measure.

**SIDDARAMAIAH**
Chief Minister

**P. OMPRAKASHA**
Secretary
Karnataka Legislative Assembly

## ANNEXURE

### Extract of the Karnataka Sales Tax Act, 1957 (Karnataka Act 25 of 1957)

XXXXX

**4. Provision for Clarification and Advance Rulings.-** (1) The Commissioner may constitute a State level 'Authority for Clarification and Advance Rulings', (hereinafter referred to in this section as Authority) consisting of three Additional Commissioners, to clarify the rate of tax applicable under this Act in respect of any goods liable to tax under the Act or the exigibility of any transaction to tax under the Act on an application by a dealer registered under the Act.

XXXXX

(7) Where an application is allowed under sub-section (5), the Authority shall after examining such further material as may be placed before it by the Applicant or obtained by the Authority, pass such order as deemed fit on the questions specified in the application, after giving an opportunity to the applicant of being heard, if he so desires. The authority shall pass an order within four weeks of the receipt of any application and a copy of such order shall be sent to the applicant and to the officer concerned.

XXXXX

(10) The order of the Authority under sub-section (7) shall be binding as aforesaid unless there is a change in law or facts on the basis of which the order was passed.

(11) Where the authority on a representation made to it by any officer or otherwise finds that an order passed by it was obtained by the applicant by fraud or misrepresentation of facts, it may, by order, declare such order to be void ab initio and thereupon all the provisions of this Act shall apply to the applicant as if such order had never been made.

(12) A copy of the order made under sub-section (11) shall be sent to the applicant and the Commissioner or the officer concerned.

XXXXX

**Extract of the Karnataka Entertainments Tax Act, 1958 (Karnataka Act No.30 of 1958)**

XXXXX

**4-AA. Collection of Service Charges.-** Every proprietor of a cinema theatre paying tax on cinematograph show under Section 3-A or 4-A, subject to such rules as may be prescribed, may collect as service charges, an amount of not exceeding the amount specified in the table below, on each payment for admission to any class, namely.-

| Sl. No. | Classification of theatres | Amount |
|---|---|---|
| (1) | (2) | (3) |
| (a) | Air-conditioned and Air-cooled theatres | Upto a maximum of one rupee and fifty paise on each payment for admission |
| (b) | Other theatres but excluding Touring Talkies | Upto a maximum of one rupee on each payment for admission |

XXXXX

**Extract of the Karnataka Tax on Professions Trades, Callings and Employments Act, 1976 (Karnataka Act No.35 of 1976)**

XXXXX

**SCHEDULE**

**Rates of tax on professions, trades, callings and employments**

| Sl. No. | Description of Goods | Rate of tax |
|---|---|---|
| **(1)** | **(2)** | **(3)** |
| 1. | Salary or wage earners whose salary or wage or both,As the case may be, for a month is | |
| (a) | xxxxx | xxxx |
| (b) | xxxxx | xxxx |
| (c) | xxxxx | xxxx |
| (d) | not less than Rs.10,000 but less than Rs.15,000 | Rs.150 per month |
| (e) | Rs.15,000 and above | Rs.200 per month |

XXXXX

4. (i) Chief Agents, Principal Agents, Special Agents, Insurance Agents and Surveyors or Loss Assessors registered or licensed under the Insurance Act, 1938 (Central Act IV of 1938), whose annual income is not less than Rs.36,000 — Rs.1,000 per annum

(ii) Pigmy Agents or UTI Agents whose annual income is not less than Rs.36,000

**Explanation.-** For the purpose of this item income shall be Deemed to the commission or any other remuneration by whatever name called, earned by the person such as Chief Agent, Principal Agent, Special Agent, Insurance Agent, Survey or Loss Assessor or Pigmy Agents or UTI Agents.

XXXXX

**Extract of the Karnataka Tax on Entry of Goods Act, 1979 (Karnataka Act No. 27 of 1979)**

XXXXX

**12-C. Provision for clarification and advance rulings.-** (1) The "Authority for Clarification and Advance Rulings", (hereinafter referred to in this section as Authority) constituted under Section 60 of the Karnataka Value Added Tax Act, 2003 (Karnataka Act 32 of 2004) (hereinafter referred to as the 'said Act') shall be authorized to clarify the rate of tax applicable under this Act in respect of any goods liable to tax under the Act or the exigibility of any transaction to tax under the Act on an application by a dealer registered under the Act.

(2) All the provisions of the said Act including provisions relating to appeal and the rules made thereunder relating to the manner of making an application for issue of clarification, payment of fee, disposal and implementation of the order passed by the Authority shall mutatis mutandis apply to this section.

XXXXX

(7) Without prejudice to the generality of the foregoing power, the Commissioner may on his own motion or on an application by a dealer liable to pay tax under this Act, if he considers it necessary or expedient so to do, for the purpose of maintaining uniformity in the work of assessments and collection of revenue or for the removal of any doubt, clarify the rate of tax payable under this Act in respect of goods liable to tax under the Act or the doubt, as the case may be, and all officers and persons employed in the execution of this Act shall observe and follow such clarification.

Provided that no such application shall be entertained unless it is accompanied by proof of payment of such fee paid in such manner as may be prescribed.

XXXXX


# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>Part – IV-A | ಬೆಂಗಳೂರು, ಮಂಗಳವಾರ, ಜುಲೈ ೩೦, ೨೦೧೩ (ಶ್ರಾವಣ ೮, ಶಕ ವರ್ಷ ೧೯೩೫)<br>**Bangalore, Tuesday, July 30, 2013 (Shravana 8, Shaka Varsha 1935)** | ನಂ.೯೯೮<br>**No. 998** |
|---|---|---|


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/08/LA Bill/2013, Bangalore, Dated: 30-07-2013**

The following Bill was introduced in Legislative Assembly on 30-7-2013

## ಕರ್ನಾಟಕ ವಿಧಾನ ಸಭೆ

**ಹದಿನಾಲ್ಕನೇ ವಿಧಾನ ಸಭೆ**

**ಮೊದಲನೇ ಅಧಿವೇಶನದ ಮುಂದುವರೆದ ಉಪವೇಶನ**

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ಎರಡನೇ ತಿದ್ದುಪಡಿ) ವಿಧೇಯಕ, 2013

**(2013ರ ವಿಧಾನಸಭೆಯ ವಿಧೇಯಕ ಸಂಖ್ಯೆ–08)**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ಎರಡನೇ ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು 2013ರ ಆಗಸ್ಟ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **40ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 40ನೇ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು ಮತ್ತು 2005ರ ಏಪ್ರಿಲ್ ಮೊದಲನೇ ದಿನದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ:–

"(1) ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಸಲ್ಲಿಸಬೇಕಾದ ತೆರಿಗೆಯ ಮೊಬಲಗಿನ ಸಂಬಂಧದಲ್ಲಿ 38ನೇ ಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಅಥವಾ 39ನೇ ಪ್ರಕರಣದ ಅಡಿಯಲ್ಲಿ ತೆರಿಗೆ ಮರು ನಿರ್ಧರಣೆಯನ್ನು, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದ ತರುವಾಯ ಐದು ವರ್ಷಗಳ ನಂತರ ಮಾಡತಕ್ಕದ್ದಲ್ಲ:

ಪರಂತು, 2007ರ ಮಾರ್ಚ್ 31ಕ್ಕೆ ಕೊನೆಗೊಳ್ಳುವವರೆಗಿನ ಅವಧಿಯವರೆಗಿನ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಎಂಟು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು:

ಮತ್ತು ಪರಂತು, 2007ರ ಏಪ್ರಿಲ್ 1ನೇ ದಿನಾಂಕದಿಂದ ಆರಂಭವಾಗಿ 2012ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗಿನ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆಯನ್ನು ಅಥವಾ ಮರು ತೆರಿಗೆ ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಏಳು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನೋಂದಾಯಿತನಾಗಲು ಬದ್ಧನಾಗಿದ್ದಾಗ್ಯೂ ಹಾಗೆ ಮಾಡಲು ತಪ್ಪಿದ ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆಯನ್ನು ಸಂದಾಯ ಮಾಡದಿದ್ದಲ್ಲಿ ಅಥವಾ ತೆರಿಗೆಯನ್ನು ಮೋಸದಿಂದ ವಂಚಿಸಿ 79ನೇ ಪ್ರಕರಣದ ಅಡಿಯಲ್ಲಿ ಶಿಕ್ಷೆಗೆ ಗುರಿಯಾಗುವ ಯಾವುದೇ ವ್ಯಾಪಾರಿಯ ಸಂದರ್ಭದಲ್ಲಿ, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದಿಂದ ಎಂಟು ವರ್ಷಗಳ ಅವಧಿಯೊಳಗೆ ತೆರಿಗೆ ನಿರ್ಧರಣೆಯನ್ನು ಮಾಡಬಹುದು ಅಥವಾ ಮರು ನಿರ್ಧರಣೆಯನ್ನು ಮಾಡಬಹುದು:

ಪರಂತು, 2007ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗೆ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆಯ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಕೊನೆಗೊಂಡ ತರುವಾಯ ಹತ್ತು ವರ್ಷಗಳ ಅವಧಿಯೊಳಗೆ ಈ ಉಪಪ್ರಕರಣದಡಿಯಲ್ಲಿ ಮಾಡತಕ್ಕದ್ದು."

**3. 60ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 60ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2ಎ) ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಪ್ರಾಧಿಕಾರವು, ಸಂಬಂಧಪಟ್ಟ ನಿರ್ಧರಣಾ ಅಥವಾ ನೋಂದಣಿ ಪ್ರಾಧಿಕಾರಕ್ಕೆ ಅದರ ಪ್ರತಿಯನ್ನು ಕಳುಹಿಸುವಂತೆ ಮಾಡತಕ್ಕದ್ದು ಮತ್ತು ಕೋರಲಾದ ಸ್ಪಷ್ಟೀಕರಣ ಅಥವಾ ಎತ್ತಲಾದ ಪ್ರಶ್ನೆ ಬಗ್ಗೆ ಅದರ ನಿರ್ಣಯವನ್ನು ಹಾಗೂ ಯಾವುದೇ ಮಾಹಿತಿ ಅಥವಾ ದಾಖಲೆಗಳನ್ನು ಕೂಡ ತರಿಸಿಕೊಳ್ಳತಕ್ಕದ್ದು.

(2ಬಿ) ಪ್ರಾಧಿಕಾರವು, ಅರ್ಜಿಯನ್ನು ಮತ್ತು ತರಿಸಿಕೊಂಡ ಯಾವುದೇ ದಾಖಲೆಗಳನ್ನು ಪರೀಕ್ಷಿಸಿದ ತರುವಾಯ, ಆದೇಶದ ಮೂಲಕ ಅರ್ಜಿಯನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು:

ಪರಂತು, ಅರ್ಜಿಯಲ್ಲಿ ಎತ್ತಲಾದ ಪ್ರಶ್ನೆಯು,

(i) ಇಲಾಖೆಯ ಯಾವೊಬ್ಬ ಅಧಿಕಾರಿಯ ಅಥವಾ ಪ್ರಾಧಿಕಾರದ ಅಥವಾ ಮೇಲ್ಮನವಿ ಪ್ರಾಧಿಕಾರದ ಅಥವಾ ಯಾವುದೇ ನ್ಯಾಯಾಲಯದ ಮುಂದೆ ಈಗಾಗಲೇ ಬಾಕಿ ಇದ್ದಲ್ಲಿ;

(ii) ತೆರಿಗೆಯನ್ನು ತಪ್ಪಿಸುವುದಕ್ಕಾಗಿ ಸ್ಪಷ್ಟವಾಗಿ ರೂಪಿಸಲಾಗಿರುವ ವ್ಯವಹರಣೆ ಅಥವಾ ವಿಷಯಕ್ಕೆ ಸಂಬಂಧಪಟ್ಟಿದ್ದರೆ,

– ಪ್ರಾಧಿಕಾರವು ಆ ಅರ್ಜಿಯನ್ನು ಅಂಗೀಕರಿಸತಕ್ಕದ್ದಲ್ಲ:

ಮತ್ತು ಪರಂತು, ಅರ್ಜಿದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡಿದ್ದ ಹೊರತು, ಈ ಉಪಪ್ರಕರಣದ ಅಡಿಯಲ್ಲಿ ಅರ್ಜಿಯನ್ನು ತಿರಸ್ಕರಿಸತಕ್ಕದ್ದಲ್ಲ ಮತ್ತು ಅರ್ಜಿಯನ್ನು ತಿರಸ್ಕರಿಸಿದಲ್ಲಿ, ಅಂಥ ತಿರಸ್ಕರಣೆಗೆ ಕಾರಣಗಳನ್ನು ಆದೇಶದಲ್ಲಿ ದಾಖಲಿಸತಕ್ಕದ್ದು.

(2ಸಿ) (2ಬಿ)ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ಆದೇಶದ ಪ್ರತಿಯನ್ನು ಅರ್ಜಿದಾರನಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸತಕ್ಕದ್ದು.

(2ಡಿ) (2ಬಿ)ನೇ ಉಪಪ್ರಕರಣದ ಅಡಿಯಲ್ಲಿ ಅರ್ಜಿಯನ್ನು ಅಂಗೀಕರಿಸಿದಲ್ಲಿ, ಪ್ರಾಧಿಕಾರವು ಅರ್ಜಿದಾರನು ತನ್ನ ಮುಂದೆ ಇಡಬಹುದಾದ ಅಥವಾ ಪ್ರಾಧಿಕಾರವು ಪಡೆದುಕೊಂಡ ಹೆಚ್ಚಿನ ವಿಷಯಗಳನ್ನು ಪರೀಕ್ಷಿಸಿದ ತರುವಾಯ ಅವನು ಹಾಗೆ ಇಚ್ಛಿಸಿದರೆ, ಅರ್ಜಿದಾರನಿಗೆ ಹಾಗೂ ಸಂಬಂಧಪಟ್ಟ ನಿರ್ಧರಣಾ ಪ್ರಾಧಿಕಾರಕ್ಕೆ ಅಥವಾ ನೋಂದಣಿ ಪ್ರಾಧಿಕಾರಕ್ಕೆ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡಿದ ತರುವಾಯ, ಅರ್ಜಿಯಲ್ಲಿ ನಿರ್ದಿಷ್ಟಪಡಿಸಲಾದ ಪ್ರಶ್ನೆಗಳಿಗೆ ಸೂಕ್ತವೆಂದು ಭಾವಿಸಬಹುದಾದಂತಹ ಆದೇಶವನ್ನು ಹೊರಡಿಸತಕ್ಕದ್ದು. ಪ್ರಾಧಿಕಾರವು, ಯಾವುದೇ ಅರ್ಜಿಯನ್ನು ಸ್ವೀಕರಿಸಿದ ತೊಂಭತ್ತು ದಿನಗಳೊಳಗೆ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಅಂಥ ಆದೇಶದ ಪ್ರತಿಯನ್ನು ಅರ್ಜಿದಾರನಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸತಕ್ಕದ್ದು."

(ii) (7)ನೇ ಉಪಪ್ರಕರಣದಲ್ಲಿ "64ನೇ ಪ್ರಕರಣದ" ಎಂಬ ಅಂಕಿಗಳು ಮತ್ತು ಪದಗಳಿಗೆ ಮೊದಲು "59ನೇ ಪ್ರಕರಣದ (4)ನೇ ಉಪಪ್ರಕರಣ," ಎಂಬ ಅಂಕಿಗಳನ್ನು, ಪದಗಳನ್ನು, ಆವರಣ ಚಿಹ್ನೆಗಳನ್ನು ಮತ್ತು ಅಲ್ಪ ವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು;

(iii) (7)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(8) ಯಾವುದೇ ನಿರ್ದಿಷ್ಟ ಸರಕುಗಳಿಗೆ ಸಂಬಂಧಿಸಿದಂತೆ (2ಡಿ)ನೇ ಉಪಪ್ರಕರಣದ ಅಡಿಯಲ್ಲಿ 'ಸ್ಪಷ್ಟೀಕರಣ ಮತ್ತು ಪೂರ್ವಾಭಾವಿ ನಿರ್ಣಯಗಳ ಪ್ರಾಧಿಕಾರವು' ನೀಡಿದ ಯಾವುದೇ ಸ್ಪಷ್ಟೀಕರಣ ಅಥವಾ ನಿರ್ಣಯದಲ್ಲಿ ಏನೇ ಇದ್ದರೂ, ಅರ್ಜಿದಾರನು ಅಂಥ ಸರಕುಗಳಿಗೆ ಸಂಬಂಧಿಸಿದಂತೆ ಸಂದಾಯ ಮಾಡಬೇಕಾದ ತೆರಿಗೆಯ ದರವು, ಆಯುಕ್ತನು 59ನೇ ಪ್ರಕರಣದ (4)ನೇ ಉಪಪ್ರಕರಣದ ಅಡಿಯಲ್ಲಿ ಸ್ಪಷ್ಟೀಕರಿಸಬಹುದಾದಂತಹ ದರದಲ್ಲಿ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ, ಇರತಕ್ಕದ್ದು."

4. ಒಂದನೇ ಅನುಸೂಚಿಯ ತಿದ್ದುಪಡಿ.– ಮೂಲ ಅಧಿನಿಯಮದ ಒಂದನೇ ಅನುಸೂಚಿಯಲ್ಲಿ 47ನೇ ಕ್ರಮ ಸಂಖ್ಯೆಗೆ ಸಂಬಂಧಪಟ್ಟ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಆಯವ್ಯಯ ಭಾಷಣದಲ್ಲಿ ಮಾಡಿದ ಪ್ರಸ್ತಾವಗಳನ್ನು ಮತ್ತು ಅವುಗಳಿಗೆ ಸಂಬಂಧಿಸಿದ ಇತರ ವಿಷಯಗಳನ್ನು ಜಾರಿಗೊಳಿಸುವುದಕ್ಕಾಗಿ ಮತ್ತು ವಿಶೇಷವಾಗಿ ಈ ಮುಂದಿನವುಗಳಿಗೆ, ಎಂದರೆ:–

(i) 2012ರ ಅಧಿನಿಯಮ ಸಂಖ್ಯೆ 17ರ ಮೂಲಕ ತಿದ್ದುಪಡಿಯಾದಂತೆ 39ನೇ ಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆ ಅಥವಾ ತೆರಿಗೆ ಮರು ನಿರ್ಧರಣೆಗಾಗಿ ನಿರ್ದಿಷ್ಟ ಪಡಿಸಿದ ಅವಧಿಯ ಪರಿಮಿತಿಯು ಪೂರ್ವಾನ್ವಯವಾಗಿ ಜಾರಿಗೆ ಬಂದಿದೆ ಎಂಬುದನ್ನು ಸ್ಪಷ್ಟ ಪಡಿಸುವುದಕ್ಕಾಗಿ; ಮತ್ತು

(ii) ವಾಣಿಜ್ಯ ತೆರಿಗೆಗಳ ಆಯುಕ್ತರು ಹೊರಡಿಸಿದ ಯಾವುದೇ ಸ್ಪಷ್ಟೀಕರಣವು, ಸ್ಪಷ್ಟೀಕರಣ ಮತ್ತು ಪೂರ್ವಭಾವಿ ನಿರ್ಣಯಗಳ ಪ್ರಾಧಿಕಾರದ ಸ್ಪಷ್ಟೀಕರಣಕ್ಕೆ ಅಧ್ಯಾರೋಹಿಯಾಗಿರತಕ್ಕದ್ದು ಎಂದು ನಿರ್ದಿಷ್ಟ ಪಡಿಸುವುದಕ್ಕಾಗಿ,–

– ಉಪಬಂಧಗಳನ್ನು ಕಲ್ಪಿಸಲು ಕರ್ನಾಟಕ ಮೌಲ್ಯವರ್ಧಿತ ತೆರಿಗೆಗಳ ಅಧಿನಿಯಮ 2003ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಕೆಲವು ಪ್ರಸ್ತುತ ಉಪಬಂಧಗಳನ್ನು ಸರಳಗೊಳಿಸುವುದನ್ನು ಒಳಗೊಂಡಂತೆ ಕೆಲವು ತಿದ್ದುಪಡಿಗಳನ್ನು ಕೆಲವು ಆನುಷಂಗಿಕ ಮತ್ತು ಪ್ರಾಸಂಗಿಕ ತಿದ್ದುಪಡಿಗಳನ್ನು ಸಹ ಮಾಡಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಸಿದ್ದರಾಮಯ್ಯ**
ಮುಖ್ಯಮಂತ್ರಿ

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) ಉದ್ಧೃತ

XX XX XX

40. ತೆರಿಗೆ ನಿರ್ಧರಣೆಗಾಗಿ ಕಾಲಮಿತಿ.– (1) ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಬಾಕಿ ತೆರಿಗೆಯ ಮೊಬಲಗಿನ ಸಂಬಂಧದಲ್ಲಿ 38ನೇ ಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಅಥವಾ 39ನೇ ಪ್ರಕರಣದ ಅಡಿಯಲ್ಲಿ ತೆರಿಗೆಯ ಮರು ನಿರ್ಧರಣೆಯನ್ನು, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದ ತರುವಾಯ ಐದು ವರ್ಷಗಳ ನಂತರ ಮಾಡತಕ್ಕದ್ದಲ್ಲ:

ಪರಂತು, 2007ರ ಮಾರ್ಚ್ 31ಕ್ಕೆ ಕೊನೆಗೊಳ್ಳುವವರೆಗಿನ ಅವಧಿಯವರೆಗಿನ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಎಂಟು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು:

ಮತ್ತು ಪರಂತು, 2007ರ ಏಪ್ರಿಲ್ 1ನೇ ದಿನಾಂಕದಿಂದ ಆರಂಭವಾಗಿ 2012ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗಿನ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆಯನ್ನು ಅಥವಾ ಮರು ತೆರಿಗೆ ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಏಳು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು.

(2) (1)ನೇ ಉಪ-ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನೋಂದಾಯಿತನಾಗಲು ಬದ್ಧನಾಗಿದ್ದಾಗ್ಯೂ ಹಾಗೆ ಮಾಡಲು ತಪ್ಪಿದ ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆಯನ್ನು ಸಂದಾಯ ಮಾಡದಿದ್ದಲ್ಲಿ ಅಥವಾ ತೆರಿಗೆಯನ್ನು ಮೋಸದಿಂದ ವಂಚಿಸಿ 79ನೇ ಪ್ರಕರಣದ ಅಡಿಯಲ್ಲಿ ಶಿಕ್ಷೆಗೆ ಗುರಿಯಾಗುವ ಯಾವುದೇ ವ್ಯಾಪಾರಿಯ ಸಂದರ್ಭದಲ್ಲಿ, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದಿಂದ ಎಂಟು ವರ್ಷಗಳ ಅವಧಿಯೊಳಗೆ ತೆರಿಗೆ ನಿರ್ಧರಣೆಯನ್ನು ಮಾಡಬಹುದು ಅಥವಾ ಮರು ನಿರ್ಧರಣೆಯನ್ನು ಮಾಡಬಹುದು:

ಪರಂತು, 2007ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗೆ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆಯ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಕೊನೆಗೊಂಡ ತರುವಾಯ ಹತ್ತು ವರ್ಷಗಳ ಅವಧಿಯೊಳಗೆ ಈ ಉಪಪ್ರಕರಣದಡಿಯಲ್ಲಿ ಮಾಡತಕ್ಕದ್ದು.

XX XX XX

**60. ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳು.–** (1) ಆಯುಕ್ತನು, ಅಧಿನಿಯಮದ ಅಡಿಯಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಯಾವುದೇ ಪ್ರಕರಣ ಅಥವಾ ವರ್ಗಗಳ ಪ್ರಕರಣಗಳಲ್ಲಿ ಯಾವುವೇ ಸರಕುಗಳ ಸಂಬಂಧದಲ್ಲಿ ತೆರಿಗೆಯ ದರದ ಬಗ್ಗೆ ಅಥವಾ ಯಾವುದೇ ವ್ಯವಹರಣೆಯ ತೆರಿಗೆ ಬದ್ಧತೆಯ ಬಗ್ಗೆ ಅಥವಾ ಹೂಡುವಳಿ ತೆರಿಗೆಯ ಕಡಿತದ ಅರ್ಹತೆ ಬಗ್ಗೆ ಅಥವಾ ಅಧಿನಿಯಮದ ಅಡಿಯಲ್ಲಿ ಮೂಲದಲ್ಲಿಯೇ ತೆರಿಗೆ ಕಟಾಯಿಸುವ ಬದ್ಧತೆಯ ಬಗ್ಗೆ ಸ್ಪಷ್ಟೀಕರಣ ನೀಡಲು ಕನಿಷ್ಠ ಮೂವರು ಅಪರ ಆಯುಕ್ತರುಗಳನ್ನು ಒಳಗೊಂಡ "ಸ್ಪಷ್ಟೀಕರಣ ಹಾಗೂ ಪೂರ್ವಭಾವಿ ನಿರ್ಣಯಗಳ ಪ್ರಾಧಿಕಾರ" ವನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಸ್ಪಷ್ಟೀಕರಣ ಅಥವಾ ಪೂರ್ವಭಾವಿ ನಿರ್ಣಯವನ್ನು ಕೋರುವ ಯಾವೊಬ್ಬ ನೋಂದಾಯಿತ ವ್ಯಾಪಾರಿಯು ನಿಯಮಿಸಬಹುದಾದ ಅಂಥ ರೀತಿಯಲ್ಲಿ ಅಂಥ ಶುಲ್ಕವನ್ನು ಸಂದಾಯ ಮಾಡಿದ ಬಗ್ಗೆ ರುಜುವಾತನ್ನು ಒಳಗೊಂಡಂತೆ ಅಂಥ ನಮೂನೆಯಲ್ಲಿ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸತಕ್ಕದ್ದು.

(3) ಯಾವೊಬ್ಬ ಅಧಿಕಾರಿ ಅಥವಾ ಇಲಾಖೆಯ ಯಾವುದೇ ಇತರ ಪ್ರಾಧಿಕಾರ ಅಥವಾ ಅಪೀಲು ನ್ಯಾಯಾಧೀಕರಣವು, ಈ ಅಧಿನಿಯಮದ ಅಡಿಯಲ್ಲಿ ಯಾವ ಪ್ರಕರಣದ ಸಂಬಂಧದಲ್ಲಿ ಅರ್ಜಿದಾರನು ಅರ್ಜಿಯನ್ನು ಹಾಕಿಕೊಂಡಿರುವನೋ ಅದರ ಬಗ್ಗೆ ತೀರ್ಮಾನವನ್ನು ಕೈಗೊಳ್ಳಲು ಮುಂದುವರೆಯತಕ್ಕದ್ದಲ್ಲ.

**XX XX XX**

(7) 64ನೇ ಪ್ರಕರಣದ (2)ನೇ ಉಪ–ಪ್ರಕರಣ ಮತ್ತು 66ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಈ ಪ್ರಕರಣದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು ಆದೇಶವು ಅಂತಿಮವಾಗಿರತಕ್ಕದ್ದು.

**XX XX XX**

**ಒಂದನೇ ಅನುಸೂಚಿ**

**(5ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ತೆರಿಗೆಯಿಂದ ವಿನಾಯಿತಿಗೊಳಿಸಿದ ಸರಕುಗಳು)**

| ಕ್ರಮ ಸಂಖ್ಯೆ | ಸರಕುಗಳ ವಿವರ |
|---|---|
| 1 | 2 |
| 1. | ಕೈಯಿಂದ ನಡೆಸುವ ಅಥವಾ ಪ್ರಾಣಿಗಳಿಂದ ಎಳೆಸುವ ಕೃಷಿ ಉಪಕರಣಗಳು |
| | **XX XX XX** |
| 47. | ಕಲ್ಲುಸಕ್ಕರೆ, ಮಿಠಾಯಿ ಮತ್ತು ಅಂತಹುಗಳನ್ನು ಹೊರತುಪಡಿಸಿ, ಸಕ್ಕರೆ. |

**XX XX XX**

## KARNATAKA LEGISLATIVE ASSEMBLY
### FOURTEENTH LEGISLATIVE ASSEMBLY
### FIRST SESSION ADJOURNED MEETING

## THE KARNATAKA VALUE ADDED TAX (SECOND AMENDMENT) BILL, 2013
### (L.A. Bill No. 08 of 2013)

A Bill further to amend the Karnataka Value Added Tax Act, 2003.

Whereas it is expedient further to amend the Karnataka Value Added Tax Act, 2003 (Karnataka Act 32 of 2004) for the purposes hereinafter appearing;

Be it enacted by the Karnataka State Legislature in the Sixty fourth year of the Republic of India, as follows.-

**1. Short title and commencement.-** (1) This Act may be called the Karnataka Value Added Tax ( Second Amendment) Act, 2013.

(2) It shall come into force with effect from the First day of August, 2013.

**2. Amendment of section 40.-** In the Karnataka Value Added Tax Act, 2003 (Karnataka Act 32 of 2004) (hereinafter referred to as the principal Act), in section 40, for sub-sections (1) and (2), the following shall be and shall be deemed to have been substituted with effect from the first day of April, 2005, namely:-

"(1) An assessment under section 38 or re-assessment under Section 39 of an amount of tax due for any prescribed tax period shall not be made after five years after the end of the prescribed tax period.

Provided that an assessment or reassessment relating to any tax period upto the period ending 31st day of March, 2007 shall be made within a period of eight years after the end of the prescribed tax period.

Provided further that an assessment or reassessment relating to any tax period commencing from the 1st day of April, 2007 upto the period ending 31st day of March, 2012 shall be made within a period of seven years after the end of the prescribed tax period.

(2) Notwithstanding anything contained in sub-section (1), if any tax is, not paid by a dealer who has failed to get registered though liable to do so or fraudulently evaded attracting punishment under Section 79, an assessment or reassessment may be made within eight years from the end of the prescribed tax period.

Provided that an assessment or reassessment relating to any tax period upto the period ending 31st day of March, 2007 shall be made under this sub-section within a period of ten years after the end of the prescribed tax period."

3**. Amendment of section 60.-** In section 60 of the principal Act,

(i) after sub-section (2), the following shall be inserted, namely:-

"(2A) On receipt of an application, the Authority shall cause a copy thereof to be forwarded to the assessing or registering authority concerned and call for its finding on the clarification sought or question raised and also any information or records.

(2B) The Authority may, after examining the application and any records called for, by order, either, admit or reject the application.

Provided that the Authority shall not allow the application where the question raised in the application,-

(i) is already pending before any officer or authority of the Department or Appellate Tribunal or any Court;

(ii) relates to a transaction or issue which is designed apparently for the avoidance of tax.

Provided further that no application shall be rejected under this sub-section unless an opportunity has been given to the applicant of being heard and where the application is rejected, reasons for such rejections shall be recorded in the order.

(2C) A copy of every order made under sub-section (2B) shall be sent to the applicant and the officer concerned.

(2D) Where an application is admitted under sub-section (2B), the Authority shall after examining such further material as may be placed before it by the applicant or obtained by the Authority, pass such order as deemed fit on the questions specified in the application, after giving an opportunity to the applicant of being heard, if he so desires and also to the assessing authority or registering authority concerned. The authority shall pass an order within ninety days of the receipt of any application and a copy of such order shall be sent to the applicant and to the officer concerned."

(ii) in sub-section (7), after the words "the provisions of", the words, figures, letter and brackets "sub-section (4) of section 59," shall be inserted;

(iii) after sub-section (7) so amended, the following shall be inserted, namely:-

"(8) Notwithstanding any clarification or any ruling given by the 'Authority for Clarification and Advance Rulings' under sub-section (2D) pertaining to any particular goods, the rate of tax payable in respect of such goods by the applicant shall be at such rate as may be clarified by the Commissioner under sub-section (4) of section 59, from the date of its publication in the official Gazette."

4**. Amendment of First Schedule.-** In First Schedule of the principal Act, the entries relating to serial number 47 shall be omitted.

## STATEMENT OF OBJECTS AND REASONS

It is considered necessary to amend the Karnataka Value Added Tax Act, 2003 to give effect to the proposals made in the Budget particularly to,

(i) clarify that the time limit specified for assessment or re-assessment under section 39 as amended by Act No.17 of 2012 is of retrospective effect; and

(ii) specify that any clarification issued by the Commissioner of Commercial Taxes overrides the clarification of the Authority for Clarification and Advance Rulings.

Certain consequential and incidental amendments including amendments to rationalise certain current provisions are also made.

Hence the Bill.

## FINANCIAL MEMORANDUM

There is no extra expenditure involved in the proposed legislative measure.

**SIDDARAMAIAH**
Chief Minister

**P. OMPRAKASHA**
Secretary
Karnataka Legislative Assembly

## ANNEXURE

## EXTRACT OF THE KARNATAKA VALUE ADDED TAX ACT, 2003

## (KARNATAKA ACT NO. 32 OF 2004)

XX XX XX

**40. Period of limitation for assessment.-** (1) An assessment under Section 38 or re-assessment under Section 39 of an amount of tax due for any prescribed tax period shall not be made after five years after the end of the prescribed tax period.

Provided that an assessment or reassessment relating to any tax period upto the period ending 31st day of March, 2007 shall be made within a period of eight years after the end of the prescribed tax period:

Provided further that an assessment or reassessment relating to any tax period commencing from the 1st day of April, 2007 upto the period ending 31st day of March, 2012 shall be made within a period of seven years after the end of the prescribed tax period.

(2) Notwithstanding anything contained in sub-section (1), if any tax is, not paid by a dealer who has failed to get registered though liable to do so or fraudulently evaded attracting punishment under Section 79, an assessment or reassessment may be made within eight years from the end of the prescribed tax period:

Provided that an assessment or reassessment relating to any tax period upto the period ending 31st day of March, 2007 shall be made under this sub-section within a period of ten years after the end of the prescribed tax period.

XX XX XX

**60. Clarification and Advance Rulings.-** (1) The Commissioner may constitute an 'Authority for Clarification and Advance Rulings', consisting of atleast three Additional Commissioners, to clarify the rate of tax in respect of any goods or the exigibility to tax of any transaction or eligibility of deduction of input tax or liability of deduction of tax at source under the Act, in respect of any case or class of cases as the Commissioner may specify.

(2) Any registered dealer seeking clarification or advance ruling under this section, shall make an application to the Authority in such form, accompanied by proof of payment of such fee, paid in such manner as may be prescribed.

(3) No officer or any other authority of the Department or the Appellate Tribunal shall proceed to decide any issue in respect of which an application has been made by an applicant under this Section.

(7) Subject to the provisions of sub-section (2) of Section 64 and Section 66, every order passed under this section shall be final.

XX XX XX

## FIRST SCHEDULE

## (Goods exempted from tax under sub-section (1) of Section 5)

| Serial Number | Description of Goods |
|---|---|
| 1 | 2 |
| 1. | Agricultural implements manually operated or animal driven. |

XX XX XX

| | |
|---|---|
| 47. | Sugar other than sugar candy, confectionery and the like. |

XX XX XX

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೩೧, ೨೦೧೩ (ಶ್ರಾವಣ ೯, ಶಕ ವರ್ಷ ೧೯೩೫) | ನಂ.೯೯೯ |
| **Part – IV-A** | **Bangalore, Wednesday, July 31, 2013 (Shravana 9, Shaka Varsha 1935)** | **No. 999** |


## FINANCE SECRETARIAT

### CORRIGENDUM

**No: FD 165 CSL 2013, Bangalore, dated: 31st July 2013**

In Notification-III No. FD 165 CSL 2013, dated: 30-07-2013 in part (a) (ii) the words shall be read as ***"thirty per tonne"*** instead of ***"forty five per tonne".***

By order and in the name of the Governor of Karnataka,

**D.R. SHASHIDHAR**
Under Secretary to Government
Finance Department (C.T-1)


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೩೧, ೨೦೧೩ (ಶ್ರಾವಣ ೯, ಶಕ ವರ್ಷ ೧೯೩೫) | ನಂ.೧೦೦೦ |
| **Part – IV-A** | **Bangalore, Wednesday, July 31, 2013 (Shravana 9, Shaka Varsha 1935)** | **No. 1000** |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 35 ಶಾಸನ 2013, ಬೆಂಗಳೂರು, ದಿನಾಂಕ: 31–07–2013**

ಕರ್ನಾಟಕ ಧನವಿನಿಯೋಗ (ಸಂಖ್ಯೆ: 2) ವಿಧೇಯಕ, 2013ಕ್ಕೆ 2013ರ ಜುಲೈ ತಿಂಗಳ ಮುವತ್ತೊಂದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 52 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013ರ ಕರ್ನಾಟಕ ಅಧಿನಿಯಮ ಸಂಖ್ಯೆ 52**

(2013ರ ಜುಲೈ ಮುವತ್ತೊಂದನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಧನವಿನಿಯೋಗ (ಸಂಖ್ಯೆ 2) ಅಧಿನಿಯಮ, 2013

(2013ರ ಜುಲೈ ಮುವತ್ತೊಂದನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

2013–14ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಮೊತ್ತ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ಅಧಿನಿಯಮ.

2013–14ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ:

ಇದು ಭಾರತ ಗಣರಾಜ್ಯದ ಅರವತ್ತನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮವಾಗಲಿ.

1. **ಸಂಕ್ಷಿಪ್ತ ಹೆಸರು:** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಸಂಖ್ಯೆ 2) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

2. **ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ 2013–14ನೇ ಹಣಕಾಸು ವರ್ಷಕ್ಕಾಗಿ 12511592.19 ಲಕ್ಷ ರೂಪಾಯಿಗಳ ನೀಡಿಕೆ:** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸೇವೆಗಳ ಸಂಬಂಧದಲ್ಲಿ 2013–14ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ (2013ರ ಕರ್ನಾಟಕ ಅಧಿನಿಯಮ ಸಂಖ್ಯೆ:25ರಲ್ಲಿ ಸಂದಾಯ ಮಾಡಲು ಅಧಿಕಾರ ನೀಡಲಾದ 4041371.72 ಲಕ್ಷ ರೂಪಾಯಿಗಳನ್ನು ಒಳಗೊಂಡಂತೆ) ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಒಂದು ಲಕ್ಷದ ಇಪ್ಪತ್ತೈದು ಸಾವಿರದ ಒಂದು ನೂರಾ ಹದಿನೈದು ಕೋಟಿ ತೊಂಭತ್ತೆರಡು ಲಕ್ಷದ ಹತ್ತೊಂಭತ್ತು ಸಾವಿರ ರೂಪಾಯಿಗಳಿಗೆ ಮೀರದಷ್ಟು ಮೊಬಲಗನ್ನು ಮಾತ್ರ ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು.

3. **ಧನವಿನಿಯೋಗ:** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

## ಅನುಸೂಚಿ

### (2 ಮತ್ತು 3ನೇ ಪ್ರಕರಣಗಳನ್ನು ನೋಡಿ)

(₹. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | ಒಟ್ಟು |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 4,29,172.01 | 27.53 | 4,29,199.54 |
| | | ಬಂಡವಾಳ | 9,615.65 | ... | 9,615.65 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 1,70,819.91 | 10.00 | 1,70,829.91 |
| | | ಬಂಡವಾಳ | 20,127.00 | ... | 20,127.00 |
| 03 | ಆರ್ಥಿಕ | ರಾಜಸ್ವ | 10,49,434.46 | 43.27 | 10,49,477.73 |
| | | ಬಂಡವಾಳ | 2,033.96 | ... | 2,033.96 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 75,785.64 | 16,561.85 | 92,347.49 |
| | | ಬಂಡವಾಳ | 1,100.00 | ... | 1,100.00 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 4,42,544.78 | ... | 4,42,544.78 |
| | | ಬಂಡವಾಳ | 25,653.01 | ... | 25,653.01 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ರಾಜಸ್ವ | 1,365.00 | ... | 1,365.00 |
| | | ಬಂಡವಾಳ | 53,720.08 | ... | 53,720.08 |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 5,34,798.19 | 1,600.00 | 5,36,398.19 |
| | | ಬಂಡವಾಳ | 3,06,132.06 | ... | 3,06,132.06 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 1,03,082.48 | 42,016.00 | 1,45,098.48 |
| | | ಬಂಡವಾಳ | 1,175.00 | ... | 1,175.00 |
| 09 | ಸಹಕಾರ | ರಾಜಸ್ವ | 2,08,113.69 | ... | 2,08,113.69 |
| | | ಬಂಡವಾಳ | 4,490.00 | ... | 4,490.00 |
| 10 | ಸಮಾಜ ಕಲ್ಯಾಣ | ರಾಜಸ್ವ | 4,69,025.20 | ... | 4,69,025.20 |
| | | ಬಂಡವಾಳ | 35,533.17 | ... | 35,533.17 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 3,33,001.70 | ... | 3,33,001.70 |
| | | ಬಂಡವಾಳ | 13,665.00 | ... | 13,665.00 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 29,985.32 | ... | 29,985.32 |
| | | ಬಂಡವಾಳ | 27,330.52 | ... | 27,330.52 |
| 13 | ಆಹಾರ ಮತ್ತು ನಾಗರಿಕ ಸರಬರಾಜು | ರಾಜಸ್ವ | 3,51,042.29 | 2.92 | 3,51,045.21 |
| | | ಬಂಡವಾಳ | 255.00 | ... | 255.00 |
| 14 | ಕಂದಾಯ | ರಾಜಸ್ವ | 3,98,789.55 | 3,000.00 | 4,01,789.55 |
| | | ಬಂಡವಾಳ | 8,286.28 | ... | 8,286.28 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 18,212.75 | ... | 18,212.75 |
| | | ಬಂಡವಾಳ | 1,250.00 | ... | 1,250.00 |

ಅನುಸೂಚಿ
(2 ಮತ್ತು 3ನೇ ಪ್ರಕರಣಗಳನ್ನು ನೋಡಿ)

(₹. ಲಕ್ಷಗಳಲ್ಲಿ)

| | | | ಮೀರದ ಮೊಬಲಗು | | |
|---|---|---|---|---|---|
| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | ಒಟ್ಟು |
| 1 | 2 | | 3 | 4 | 5 |
| 16 | ವಸತಿ | ರಾಜಸ್ವ | 1,47,816.19 | ... | 1,47,816.19 |
| | | ಬಂಡವಾಳ | ... | ... | ... |
| 17 | ಶಿಕ್ಷಣ | ರಾಜಸ್ವ | 18,52,067.19 | ... | 18,52,067.19 |
| | | ಬಂಡವಾಳ | 47,071.00 | ... | 47,071.00 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 66,631.04 | ... | 66,631.04 |
| | | ಬಂಡವಾಳ | 21,914.52 | ... | 21,914.52 |
| 19 | ನಗರಾಭಿವೃದ್ಧಿ | ರಾಜಸ್ವ | 7,19,163.50 | ... | 7,19,163.50 |
| | | ಬಂಡವಾಳ | 1,12,700.00 | ... | 1,12,700.00 |
| 20 | ಲೋಕೋಪಯೋಗಿ | ರಾಜಸ್ವ | 2,26,690.24 | ... | 2,26,690.24 |
| | | ಬಂಡವಾಳ | 4,27,256.09 | ... | 4,27,256.09 |
| 21 | ಜಲಸಂಪನ್ಮೂಲ | ರಾಜಸ್ವ | 1,03,377.47 | ... | 1,03,377.47 |
| | | ಬಂಡವಾಳ | 7,57,664.71 | ... | 7,57,664.71 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 5,11,198.82 | ... | 5,11,198.82 |
| | | ಬಂಡವಾಳ | 34,909.00 | ... | 34,909.00 |
| 23 | ಕಾರ್ಮಿಕ | ರಾಜಸ್ವ | 56,431.43 | ... | 56,431.43 |
| | | ಬಂಡವಾಳ | 2,400.00 | ... | 2,400.00 |
| 24 | ಇಂಧನ | ರಾಜಸ್ವ | 5,29,201.27 | 300.00 | 5,29,501.27 |
| | | ಬಂಡವಾಳ | 1,15,080.00 | ... | 1,15,080.00 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 25,766.37 | ... | 25,766.37 |
| | | ಬಂಡವಾಳ | 550.00 | ... | 550.00 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 23,609.38 | ... | 23,609.38 |
| | | ಬಂಡವಾಳ | 32,620.00 | ... | 32,620.00 |
| 27 | ಕಾನೂನು | ರಾಜಸ್ವ | 58,430.21 | ... | 58,430.21 |
| | | ಬಂಡವಾಳ | 1,000.00 | ... | 1,000.00 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 14,614.52 | 285.97 | 14,900.49 |
| 29 | ಋಣ ಮೇಲುಸ್ತುವಾರಿ | ರಾಜಸ್ವ | ... | 8,50,000.00 | 8,50,000.00 |
| | | ಬಂಡವಾಳ | ... | 5,84,042.00 | 5,84,042.00 |
| | **ಜುಮ್ಲಾ** | | **11,013,702.65** | **1,497,889.54** | **12,511,592.19** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಮುದಗಲ್**
ಸರ್ಕಾರದ ಕಾರ್ಯದರ್ಶಿ(ಪ್ರ)
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೩೧, ೨೦೧೩ (ಶ್ರಾವಣ ೯, ಶಕ ವರ್ಷ ೧೯೩೫) | ನಂ.೧೦೦೧ |
| **Part – IV-A** | **Bangalore, Wednesday, July 31, 2013 (Shravana 9, Shaka Varsha 1935)** | **No. 1001** |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 36 ಶಾಸನ 2013, ಬೆಂಗಳೂರು, ದಿನಾಂಕ: 31–07–2013**

The Karnataka Taxation Laws (Second Amendment) Bill 2013ಕ್ಕೆ 2013ರ ಜುಲೈ ತಿಂಗಳ ಮುವತ್ತೊಂದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 53 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**KARNATAKA ACT NO 53 OF 2013**

(First Published in the Karnataka Gazette Extra-ordinary on the Thirty First day of July, 2013)

## THE KARNATAKA TAXATION LAWS (SECOND AMENDMENT) ACT, 2013

(Received the assent of the Governor on the Thirty First day of July, 2013)

An Act further to amend certain taxation laws in force in the State of Karnataka.

Whereas it is expedient further to amend certain taxation laws for the purposes hereinafter appearing;

Be it enacted by the Karnataka State Legislature in the Sixty Fourth year of the Republic of India, as follows.-

**1. Short title and commencement**.- (1) This Act may be called the Karnataka Taxation Laws (Second Amendment) Act, 2013.

(2) It shall come into force with effect from the First day of August, 2013.

**2. Amendment of Karnataka Act 25 of 1957.-** In the Karnataka Sales Tax Act, 1957 (Karnataka Act 25 of 1957), in section 4, after sub-section (12), the following shall be inserted, namely:-

"(13) Notwithstanding any clarification or any ruling given by the 'Authority for Clarification and Advance Rulings' under sub-section (7) pertaining to any particular goods, the rate of tax payable in respect of such goods by the applicant shall be at such rate as may be clarified by the Commissioner under sub-section (2) of section 3-A, from the date of its publication in the official Gazette."

**3. Amendment of Karnataka Act 30 of 1958.-** In the Karnataka Entertainments Tax Act, 1958 (Karnataka Act 30 of 1958), in section 4-AA, in the table,

(i) in the entries relating to serial number (a), in column (3), for the words "one rupee and fifty paise", the words "three rupees" shall be substituted;

(ii) in the entries relating to serial number (b), in column (3), for the words "one rupee", the words "two rupees" shall be substituted.

**4. Amendment of Karnataka Act 35 of 1976.-** In the Karnataka Tax on Professions, Trades, Callings and Employments Act, 1976 (Karnataka Act 35 of 1976), in the schedule, in the entries relating to serial number 4, in column (2), for the letters and figures "Rs.36,000", occurring in two places, the letters and figures "Rs.1,20,000" shall respectively be substituted.

**5. Amendment of Karnataka Act 27 of 1979.-** In the Karnataka Tax on Entry of Goods Act, 1979 (Karnataka Act 27 of 1979), in section 12-C, after sub-section (2), the following shall be inserted, namely:-

"(3) Notwithstanding any clarification or any ruling given by the 'Authority for Clarification and Advance Rulings' under sub-section (1) pertaining to any particular goods, the rate of tax payable in respect of such goods by the applicant shall be at such rate as may be clarified by the Commissioner under sub-section (7) of section 12, from the date of its publication in the official Gazette."

By Order and in the name of the Governor of Karnataka,

**K.S. MUDAGAL**
Secretary to Government (i/c)
Department of Parliamentary Affairs and Legislation

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೩೧, ೨೦೧೩ (ಶ್ರಾವಣ ೯, ಶಕ ವರ್ಷ ೧೯೩೫) | ನಂ.೧೦೦೨ |
|---|---|---|
| Part – IV-A | Bangalore, Wednesday, July 31, 2013 (Shravana 9, Shaka Varsha 1935) | No. 1002 |

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 37 ಶಾಸನ 2013, ಬೆಂಗಳೂರು, ದಿನಾಂಕ: 31–07–2013**

ಕರ್ನಾಟಕ ಮೌಲ್ಯ ವರ್ಧಿತ ತೆರಿಗೆ (ಎರಡನೇ ತಿದ್ದುಪಡಿ) ವಿಧೇಯಕ, 2013ಕ್ಕೆ 2013ರ ಜುಲೈ ತಿಂಗಳ ಮುವತ್ತೊಂದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ: 54 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2013ರ ಕರ್ನಾಟಕ ಅಧಿನಿಯಮ ಸಂಖ್ಯೆ 54**

(2013ರ ಜುಲೈ ಮುವತ್ತೊಂದನೇ ದಿನಾಂಕದಂದು ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ಎರಡನೇ ತಿದ್ದುಪಡಿ) ಅಧಿನಿಯಮ, 2013

(2013ರ ಜುಲೈ ಮುವತ್ತೊಂದನೇ ದಿನಾಂಕದಂದು ರಾಜ್ಯಪಾಲರಿಂದ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ನ್ನು (2004ರ ಕರ್ನಾಟಕ ಅಧಿನಿಯಮ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

2. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ (ಎರಡನೇ ತಿದ್ದುಪಡಿ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು 2013ರ ಆಗಸ್ಟ್ ಒಂದನೇ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **40ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ (2004ರ ಕರ್ನಾಟಕ ಅಧಿನಿಯಮ 32) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 40ನೇ ಪ್ರಕರಣದ (1) ಮತ್ತು (2)ನೇ ಉಪಪ್ರಕರಣಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು ಮತ್ತು 2005ರ ಏಪ್ರಿಲ್ ಮೊದಲನೇ ದಿನದಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ:–

"(1) ಯಾವುದೇ ನಿಯಮಿಸಲಾದ ತೆರಿಗೆ ಅವಧಿಗಾಗಿ ಸಲ್ಲಿಸಬೇಕಾದ ತೆರಿಗೆಯ ಮೊಬಲಗಿನ ಸಂಬಂಧದಲ್ಲಿ 38ನೇ ಪ್ರಕರಣದ ಅಡಿಯಲ್ಲಿ ತೆರಿಗೆ ನಿರ್ಧರಣೆಯನ್ನು ಅಥವಾ 39ನೇ ಪ್ರಕರಣದ ಅಡಿಯಲ್ಲಿ ತೆರಿಗೆ ಮರು ನಿರ್ಧರಣೆಯನ್ನು, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದ ತರುವಾಯ ಐದು ವರ್ಷಗಳ ನಂತರ ಮಾಡತಕ್ಕದ್ದಲ್ಲ:

ಪರಂತು, 2007ರ ಮಾರ್ಚ್ 31ಕ್ಕೆ ಕೊನೆಗೊಳ್ಳುವವರೆಗಿನ ಅವಧಿಯವರೆಗಿನ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಎಂಟು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು:

ಮತ್ತು ಪರಂತು, 2007ರ ಏಪ್ರಿಲ್ 1ನೇ ದಿನಾಂಕದಿಂದ ಆರಂಭವಾಗಿ 2012ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗಿನ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆಯನ್ನು ಅಥವಾ ಮರು ತೆರಿಗೆ ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಮುಕ್ತಾಯವಾದ ತರುವಾಯ ಏಳು ವರ್ಷಗಳ ಅವಧಿಯೊಳಗೆ ಮಾಡತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ನೋಂದಾಯಿತನಾಗಲು ಬದ್ಧನಾಗಿದ್ದಾಗ್ಯೂ ಹಾಗೆ ಮಾಡಲು ತಪ್ಪಿದ ಒಬ್ಬ ವ್ಯಾಪಾರಿಯು ಯಾವುದೇ ತೆರಿಗೆಯನ್ನು ಸಂದಾಯ ಮಾಡದಿದ್ದಲ್ಲಿ ಅಥವಾ ತೆರಿಗೆಯನ್ನು ಮೋಸದಿಂದ ವಂಚಿಸಿ 79ನೇ ಪ್ರಕರಣದ ಅಡಿಯಲ್ಲಿ ಶಿಕ್ಷೆಗೆ ಗುರಿಯಾಗುವ ಯಾವುದೇ ವ್ಯಾಪಾರಿಯ ಸಂದರ್ಭದಲ್ಲಿ, ನಿಯಮಿಸಲಾದ ತೆರಿಗೆ ಅವಧಿಯ ಮುಕ್ತಾಯದಿಂದ ಎಂಟು ವರ್ಷಗಳ ಅವಧಿಯೊಳಗೆ ತೆರಿಗೆ ನಿರ್ಧರಣೆಯನ್ನು ಮಾಡಬಹುದು ಅಥವಾ ಮರು ನಿರ್ಧರಣೆಯನ್ನು ಮಾಡಬಹುದು:

ಪರಂತು, 2007ರ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಅವಧಿಯವರೆಗೆ ಯಾವುದೇ ತೆರಿಗೆ ಅವಧಿಗೆ ಸಂಬಂಧಿಸಿದ ತೆರಿಗೆ ನಿರ್ಧರಣೆ ಅಥವಾ ತೆರಿಗೆಯ ಮರು ನಿರ್ಧರಣೆಯನ್ನು ನಿಯಮಿಸಲಾದ ತೆರಿಗೆ ಅವಧಿಯು ಕೊನೆಗೊಂಡ ತರುವಾಯ ಹತ್ತು ವರ್ಷಗಳ ಅವಧಿಯೊಳಗೆ ಈ ಉಪಪ್ರಕರಣದಡಿಯಲ್ಲಿ ಮಾಡತಕ್ಕದ್ದು."

3. **60ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 60ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2ಎ) ಅರ್ಜಿಯನ್ನು ಸ್ವೀಕರಿಸಿದ ಮೇಲೆ, ಪ್ರಾಧಿಕಾರವು, ಸಂಬಂಧಪಟ್ಟ ನಿರ್ಧರಣಾ ಅಥವಾ ನೋಂದಣಿ ಪ್ರಾಧಿಕಾರಕ್ಕೆ ಅದರ ಪ್ರತಿಯನ್ನು ಕಳುಹಿಸುವಂತೆ ಮಾಡತಕ್ಕದ್ದು ಮತ್ತು ಕೋರಲಾದ ಸ್ಪಷ್ಟೀಕರಣ ಅಥವಾ ಎತ್ತಲಾದ ಪ್ರಶ್ನೆ ಬಗ್ಗೆ ಅದರ ನಿರ್ಣಯವನ್ನು ಹಾಗೂ ಯಾವುದೇ ಮಾಹಿತಿ ಅಥವಾ ದಾಖಲೆಗಳನ್ನು ಕೂಡ ತರಿಸಿಕೊಳ್ಳತಕ್ಕದ್ದು.

(2ಬಿ) ಪ್ರಾಧಿಕಾರವು, ಅರ್ಜಿಯನ್ನು ಮತ್ತು ತರಿಸಿಕೊಂಡ ಯಾವುದೇ ದಾಖಲೆಗಳನ್ನು ಪರೀಕ್ಷಿಸಿದ ತರುವಾಯ, ಆದೇಶದ ಮೂಲಕ ಅರ್ಜಿಯನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು:

ಪರಂತು, ಅರ್ಜಿಯಲ್ಲಿ ಎತ್ತಲಾದ ಪ್ರಶ್ನೆಯು,

(i) ಇಲಾಖೆಯ ಯಾವೊಬ್ಬ ಅಧಿಕಾರಿಯ ಅಥವಾ ಪ್ರಾಧಿಕಾರದ ಅಥವಾ ಮೇಲ್ಮನವಿ ಪ್ರಾಧಿಕಾರದ ಅಥವಾ ಯಾವುದೇ ನ್ಯಾಯಾಲಯದ ಮುಂದೆ ಈಗಾಗಲೇ ಬಾಕಿ ಇದ್ದಲ್ಲಿ;

(ii) ತೆರಿಗೆಯನ್ನು ತಪ್ಪಿಸುವುದಕ್ಕಾಗಿ ಸ್ಪಷ್ಟವಾಗಿ ರೂಪಿಸಲಾಗಿರುವ ವ್ಯವಹರಣೆ ಅಥವಾ ವಿಷಯಕ್ಕೆ ಸಂಬಂಧಪಟ್ಟಿದ್ದರೆ,

– ಪ್ರಾಧಿಕಾರವು ಆ ಅರ್ಜಿಯನ್ನು ಅಂಗೀಕರಿಸತಕ್ಕದ್ದಲ್ಲ:

ಮತ್ತು ಪರಂತು, ಅರ್ಜಿದಾರನಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡಿದ್ದ ಹೊರತು, ಈ ಉಪಪ್ರಕರಣದ ಅಡಿಯಲ್ಲಿ ಅರ್ಜಿಯನ್ನು ತಿರಸ್ಕರಿಸತಕ್ಕದ್ದಲ್ಲ ಮತ್ತು ಅರ್ಜಿಯನ್ನು ತಿರಸ್ಕರಿಸಿದಲ್ಲಿ, ಅಂಥ ತಿರಸ್ಕರಣೆಗೆ ಕಾರಣಗಳನ್ನು ಆದೇಶದಲ್ಲಿ ದಾಖಲಿಸತಕ್ಕದ್ದು.

(2ಸಿ) (2ಬಿ)ನೇ ಉಪಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ಆದೇಶದ ಪ್ರತಿಯನ್ನು ಅರ್ಜಿದಾರನಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸತಕ್ಕದ್ದು.

(2ಡಿ) (2ಬಿ)ನೇ ಉಪಪ್ರಕರಣದ ಅಡಿಯಲ್ಲಿ ಅರ್ಜಿಯನ್ನು ಅಂಗೀಕರಿಸಿದಲ್ಲಿ, ಪ್ರಾಧಿಕಾರವು ಅರ್ಜಿದಾರನು ತನ್ನ ಮುಂದೆ ಇಡಬಹುದಾದ ಅಥವಾ ಪ್ರಾಧಿಕಾರವು ಪಡೆದುಕೊಂಡ ಹೆಚ್ಚಿನ ವಿಷಯಗಳನ್ನು ಪರೀಕ್ಷಿಸಿದ ತರುವಾಯ ಅವನು ಹಾಗೆ ಇಚ್ಛಿಸಿದರೆ, ಅರ್ಜಿದಾರನಿಗೆ ಹಾಗೂ ಸಂಬಂಧಪಟ್ಟ ನಿರ್ಧರಣಾ ಪ್ರಾಧಿಕಾರಕ್ಕೆ ಅಥವಾ ನೋಂದಣಿ ಪ್ರಾಧಿಕಾರಕ್ಕೆ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡಿದ ತರುವಾಯ, ಅರ್ಜಿಯಲ್ಲಿ ನಿರ್ದಿಷ್ಟಪಡಿಸಲಾದ ಪ್ರಶ್ನೆಗಳಿಗೆ ಸೂಕ್ತವೆಂದು ಭಾವಿಸಬಹುದಾದಂತಹ ಆದೇಶವನ್ನು ಹೊರಡಿಸತಕ್ಕದ್ದು. ಪ್ರಾಧಿಕಾರವು, ಯಾವುದೇ ಅರ್ಜಿಯನ್ನು ಸ್ವೀಕರಿಸಿದ ತೊಂಭತ್ತು ದಿನಗಳೊಳಗೆ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಅಂಥ ಆದೇಶದ ಪ್ರತಿಯನ್ನು ಅರ್ಜಿದಾರನಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸತಕ್ಕದ್ದು."

(ii) (7)ನೇ ಉಪಪ್ರಕರಣದಲ್ಲಿ "64ನೇ ಪ್ರಕರಣದ" ಎಂಬ ಅಂಕಿಗಳು ಮತ್ತು ಪದಗಳಿಗೆ ಮೊದಲು "59ನೇ ಪ್ರಕರಣದ (4)ನೇ ಉಪಪ್ರಕರಣ," ಎಂಬ ಅಂಕಿಗಳನ್ನು, ಪದಗಳನ್ನು, ಆವರಣ ಚಿಹ್ನೆಗಳನ್ನು ಮತ್ತು ಅಲ್ಪ ವಿರಾಮ ಚಿಹ್ನೆಯನ್ನು ಸೇರಿಸತಕ್ಕದ್ದು;

(iii) (7)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(8) ಯಾವುದೇ ನಿರ್ದಿಷ್ಟ ಸರಕುಗಳಿಗೆ ಸಂಬಂಧಿಸಿದಂತೆ (2ಡಿ)ನೇ ಉಪಪ್ರಕರಣದ ಅಡಿಯಲ್ಲಿ 'ಸ್ಪಷ್ಟೀಕರಣ ಮತ್ತು ಪೂರ್ವಾಭಾವಿ ನಿರ್ಣಯಗಳ ಪ್ರಾಧಿಕಾರವು' ನೀಡಿದ ಯಾವುದೇ ಸ್ಪಷ್ಟೀಕರಣ ಅಥವಾ ನಿರ್ಣಯದಲ್ಲಿ ಏನೇ ಇದ್ದರೂ, ಅರ್ಜಿದಾರನು ಅಂಥ ಸರಕುಗಳಿಗೆ ಸಂಬಂಧಿಸಿದಂತೆ ಸಂದಾಯ ಮಾಡಬೇಕಾದ ತೆರಿಗೆಯ ದರವು, ಆಯುಕ್ತನು 59ನೇ ಪ್ರಕರಣದ (4)ನೇ ಉಪಪ್ರಕರಣದ ಅಡಿಯಲ್ಲಿ ಸ್ಪಷ್ಟೀಕರಿಸಬಹುದಾದಂತಹ ದರದಲ್ಲಿ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ, ಇರತಕ್ಕದ್ದು."

**4. ಒಂದನೇ ಅನುಸೂಚಿಯ ತಿದ್ದುಪಡಿ.–** ಮೂಲ ಅಧಿನಿಯಮದ ಒಂದನೇ ಅನುಸೂಚಿಯಲ್ಲಿ 47ನೇ ಕ್ರಮ ಸಂಖ್ಯೆಗೆ ಸಂಬಂಧಪಟ್ಟ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಮುದಗಲ್**
ಸರ್ಕಾರದ ಕಾರ್ಯದರ್ಶಿ(ಪ್ರ)
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೩೧, ೨೦೧೩ (ಶ್ರಾವಣ ೯, ಶಕ ವರ್ಷ ೧೯೩೫) | ನಂ. ೧೦೦೩ |
|---|---|---|
| **Part – IV-A** | **Bangalore, Wednesday, July 31, 2013 (Shravana 9, Shaka Varsha 1935)** | **No. 1003** |


## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕವಿಪ/ಶಾರಶಾ/22/122ನೇ ಅ(ಮು.ಉ)/2013, ಬೆಂಗಳೂರು, ದಿನಾಂಕ: 31–07–2013**

**12ನೇ ಜುಲೈ, 2013**ರ ಶುಕ್ರವಾರದಂದು ಪ್ರಾರಂಭವಾದ ಕರ್ನಾಟಕ ವಿಧಾನ ಪರಿಷತ್ತಿನ ನೂರ ಇಪ್ಪತ್ತೆರಡನೆಯ ಅಧಿವೇಶನದ ಮುಂದುವರೆದ ಉಪವೇಶನವನ್ನು **31ನೇ ಜುಲೈ, 2013**ರ ಬುಧವಾರದಂದು ಅನಿರ್ದಿಷ್ಟ ಕಾಲದವರೆಗೆ ಮುಂದೂಡಲಾಯಿತು.

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**KARNATAKA LEGISLATIVE COUNCIL SECRETARIAT**

**NOTIFICATION**

**No. KLC/LGC/22/122nd Adj.Session/2013, Bangalore, Dated: 31-07-2013**

The Adjourned Meetings of Hundred and Twenty Second Session of Karnataka Legislative Council which commenced on **Friday, the 12th July, 2013** was adjourned sine-die on **Wednesday, the 31st July, 2013.**

**V. SHREESH**
Secretary
Karnataka Legislative Council

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಜುಲೈ ೩೧, ೨೦೧೩ (ಶ್ರಾವಣ ೯, ಶಕ ವರ್ಷ ೧೯೩೫) | ನಂ.೧೦೦೪ |
| Part – IV-A | Bangalore, Wednesday, July 31, 2013 (Shravana 9, Shaka Varsha 1935) | No. 1004 |

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/05/LA Bill/2013, Bangalore, Dated: 31-07-2013**

The following Bill was introduced in Legislative Assembly on 31-7-2013

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಮೊದಲನೇ ಅಧಿವೇಶನದ ಮುಂದುವರೆದ ಉಪವೇಶನ**

## ಕರ್ನಾಟಕ ಎಣ್ಣೆ ತಾಳೆ (ಸಾಗುವಳಿ, ಉತ್ಪಾದನೆ ಮತ್ತು ಸಂಸ್ಕರಣೆ ನಿಯಂತ್ರಣ) ವಿಧೇಯಕ, 2013

**(2013ರ ವಿಧಾನಸಭೆಯ ವಿಧೇಯಕ ಸಂಖ್ಯೆ-05)**

ಎಣ್ಣೆ ತಾಳೆಯ ಸಾಗುವಳಿ, ಉತ್ಪಾದನೆ ಮತ್ತು ಸಂಸ್ಕರಣೆಯ ನಿಯಂತ್ರಣಕ್ಕಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಿಗಾಗಿ ಉಪಬಂಧವನ್ನು ಕಲ್ಪಿಸುವುದಕ್ಕಾಗಿ ಒಂದು ವಿಧೇಯಕ.

ಎಣ್ಣೆ ತಾಳೆಯ ಸಾಗುವಳಿ, ಉತ್ಪಾದನೆ ಮತ್ತು ಸಂಸ್ಕರಣೆಯ ನಿಯಂತ್ರಣಕ್ಕಾಗಿ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳಿಗಾಗಿ ಉಪಬಂಧವನ್ನು ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ನಾಲ್ಕನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**- (1) ಈ ಅಧಿನಿಯಮವನ್ನು ಕರ್ನಾಟಕ ಎಣ್ಣೆ ತಾಳೆ (ಸಾಗುವಳಿ, ಉತ್ಪಾದನೆ ಮತ್ತು ಸಂಸ್ಕರಣೆ ನಿಯಂತ್ರಣ) ಅಧಿನಿಯಮ, 2013 ಎಂದು ಕರೆಯತಕ್ಕದ್ದು.

(2) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**- ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸದ ಹೊರತು,-

(ಎ) "ಕಾರ್ಖಾನೆ" ಎಂದರೆ, ಕಾರ್ಖಾನೆಗಳ ಅಧಿನಿಯಮ, 1948ರಲ್ಲಿ (1948ರ ಕೇಂದ್ರ ಅಧಿನಿಯಮ 63) ಪರಿಭಾಷಿಸಿರುವಂತೆ, ಎಣ್ಣೆ ತಾಳೆ ಹಣ್ಣುಗಳು ಮತ್ತು ಉತ್ಪನ್ನಗಳ ಸಂಸ್ಕರಣೆಗೆ ಸಂಬಂಧಿಸಿದಂತೆ ತಯಾರಿಕಾ ಪ್ರಕ್ರಿಯೆಯು ನಡೆಯುವ ಯಾವುವೇ ಆವರಣಗಳು ಮತ್ತು ಅದರ ಪ್ರಾಕಾರದ ಯಾವುದೇ ಭಾಗವನ್ನೂ ಒಳಗೊಳ್ಳುತ್ತದೆ;

(ಬಿ) "ಕಾರ್ಖಾನೆ ವಲಯ" ಎಂದರೆ, 12ನೇ ಪ್ರಕರಣದ ಅಡಿಯಲ್ಲಿ ಕೈಗಾರಿಕಾ ವಲಯವೆಂದು ಘೋಷಿಸಲಾದ ಒಂದು ಪ್ರದೇಶ;

(ಸಿ) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

(ಡಿ) "ಕಾರ್ಖಾನೆಯ ಅಧಿಭೋಗದಾರ" ಎಂದರೆ, ಕಾರ್ಖಾನೆಯ ವ್ಯವಹಾರಗಳ ಮೇಲೆ ಅಂತಿಮ ನಿಯಂತ್ರಣವನ್ನು ಹೊಂದಿರುವ ಮತ್ತು ಒಬ್ಬ ಅಧಿಭೋಗದಾರನೆಂದು ಪರಿಗಣಿಸಲ್ಪಡಲು ಹಕ್ಕು ಹೊಂದಿರುವ ಯಾವೊಬ್ಬ ವ್ಯಕ್ತಿ ಮತ್ತು ಅಂಥ ವ್ಯಕ್ತಿಯು ಆ ಕಾರ್ಖಾನೆಯ ವ್ಯವಸ್ಥಾಪನಾ ಮಂಡಲಿಯ ನಿರ್ದೇಶಕನಾಗಿರಬೇಕಾದ ಅವಶ್ಯಕತೆ ಇಲ್ಲ;

(ಇ) "ಎಣ್ಣೆ ತಾಳೆ ಉದ್ಯಮಿ" ಎಂದರೆ, ಒಂದು ನಿರ್ದಿಷ್ಟ ವಲಯದಲ್ಲಿ ಎಣ್ಣೆ ತಾಳೆಯ ಅಭಿವೃದ್ಧಿಗಾಗಿ ಸರ್ಕಾರವು ಮಾನ್ಯತೆ ನೀಡಿರುವ ಮತ್ತು ಸರ್ಕಾರವು ಕಾಲಕಾಲಕ್ಕೆ ಹೊರಡಿಸುವ ಹಂಚಿಕೆ ಆದೇಶದಲ್ಲಿ ನಿಯಮಿಸಬಹುದಾದ ಎಲ್ಲಾ ಷರತ್ತುಗಳನ್ನು ಪೂರೈಸುವ ಒಬ್ಬ ಉದ್ಯಮಿ;

(ಎಫ್) "ಎಣ್ಣೆ ತಾಳೆ" ಎಂದರೆ, ಜೀನಸ್ ಎಲೀಸ್‌ನ ತಾಳೆ ಮತ್ತು ಇದರಲ್ಲಿ ಸ್ಪೀಷೀಸ್ ಎಲೀಸ್ ಜುನೆನ್‌ಸಿಸ್ ಮತ್ತು ಎಲೀಸ್ ಒಲೈಫೆರಾ, ಮಲನೊಕೋಕಾ ಅಥವಾ ಕೊರೊಜೋ ತಳಿಗಳನ್ನು ಮತ್ತು ಈ ತಳಿಗಳ ಮಿಶ್ರತಳಿಗಳನ್ನು ಒಳಗೊಳ್ಳುತ್ತದೆ;

(ಜಿ) "ಎಣ್ಣೆ ತಾಳೆ ಆಯುಕ್ತರು" ಎಂದರೆ, 7ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ನೇಮಕಗೊಂಡ ಎಣ್ಣೆ ತಾಳೆ ಆಯುಕ್ತರು;

(ಎಚ್) "ಎಣ್ಣೆ ತಾಳೆಯ ತಾಜಾ ಹಣ್ಣಿನ ಗೊಂಚಲು (ಎಫ್‌ಎಫ್‌ಬಿ)" ಎಂದರೆ, ಸಂಸ್ಕರಿಸಿಲ್ಲದ ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲು ಮತ್ತು ಇದರಲ್ಲಿ ಅದರ ಬಿಡಿ ಹಣ್ಣು ಸಹ ಒಳಗೊಳ್ಳುತ್ತದೆ;

(ಐ) "ಎಣ್ಣೆ ತಾಳೆಯ ಬೆಳೆಗಾರ" ಎಂದರೆ, ತಾನೇ ಸ್ವತ: ಆಗಲಿ ಅಥವಾ ತನ್ನ ಸ್ವಂತ ಆಳುಗಳ ಮೂಲಕವಾಗಲಿ ಅಥವಾ ಕೂಲಿ ಕಾರ್ಮಿಕರ ಮೂಲಕವಾಗಲಿ ಅಥವಾ ತನ್ನ ಕುಟುಂಬದ ಸದಸ್ಯರ ಮೂಲಕವಾಗಲಿ ಅಥವಾ ತನ್ನ ಗೇಣಿದಾರರ ಮೂಲಕವಾಗಲಿ ಎಣ್ಣೆ ತಾಳೆಯನ್ನು ಸಾಗುವಳಿ ಮಾಡುವಂಥ ಒಬ್ಬ ವ್ಯಕ್ತಿ;

(ಜೆ) "ಎಣ್ಣೆ ತಾಳೆಯ ಪರಿಶೀಲಕ" ಎಂದರೆ, 7ನೇ ಪ್ರಕರಣದ (2)ನೇ ಉಪಪ್ರಕರಣದ ಅಡಿಯಲ್ಲಿ ನೇಮಕಗೊಂಡ ಎಣ್ಣೆ ತಾಳೆ ಪರಿಶೀಲಕ;

(ಕೆ) "ಎಣ್ಣೆ ತಾಳೆ ಉತ್ಪನ್ನ" ಎಂದರೆ, ತಾಳೆ ಎಣ್ಣೆ, ಪಾಮೊಲಿನ್, ತಾಳೆ ಸ್ಟಿಯರಿನ್, ತಾಳೆ ತಿರುಳು, ತಾಳೆ ತಿರುಳು ಎಣ್ಣೆ, ತಾಳೆ ತಿರುಳು ಹಿಂಡಿ, ತಾಳೆ ಕೊಬ್ಬು ಆಮ್ಲ ಎಣ್ಣೆ, ತಾಳೆ ಬೀಜಗಳಂಥ ಸಂಸ್ಕರಿಸಿದ ಉತ್ಪನ್ನಗಳು ಸೇರಿದಂತೆ ಎಣ್ಣೆ ತಾಳೆ ಹಣ್ಣಿನಿಂದ ನೇರವಾಗಿ ಪಡೆದ ಯಾವುದೇ ಉತ್ಪನ್ನ ಮತ್ತು ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಿದ ಯಾವುದೇ ಇತರ ಉಪ ಉತ್ಪನ್ನಗಳು;

(ಎಲ್) "ಬೆಲೆ ನಿರ್ಧರಣಾ ಸಮಿತಿ" ಎಂದರೆ, 5ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಬೆಲೆ ನಿರ್ಧರಣಾ ಸಮಿತಿ;

(ಎಂ) "ಯೋಜನೆ ನಿರ್ವಹಣಾ ಸಮಿತಿ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ಯೋಜನೆ ನಿರ್ವಹಣಾ ಸಮಿತಿ.

**3. ಯೋಜನೆ ನಿರ್ವಹಣಾ ಸಮಿತಿಯ ರಚನೆ.–** (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಸರ್ಕಾರವು, ಅಧಿಸೂಚನೆಯ ಮೂಲಕ, ಈ ಮುಂದಿನವರನ್ನು ಒಳಗೊಂಡಿರುವ ಯೋಜನೆ ನಿರ್ವಹಣಾ ಸಮಿತಿಯನ್ನು ರಚಿಸತಕ್ಕದ್ದು, ಎಂದರೆ:–

| | | |
|---|---|---|
| (i) | ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಸಂದರ್ಭಾನುಸಾರವಾಗಿ ಕಾರ್ಯದರ್ಶಿ (ತೋಟಗಾರಿಕೆ) | ಅಧ್ಯಕ್ಷರು |
| (ii) | ಸರ್ಕಾರದ ಕಾರ್ಯದರ್ಶಿ (ವೆಚ್ಚ), ಆರ್ಥಿಕ ಇಲಾಖೆ ಅಥವಾ ಅವರ ನಾಮನಿರ್ದೇಶಿತರು | ಸದಸ್ಯ |
| (iii) | ನಿರ್ದೇಶಕರು, ಪರಿಯೋಜನಾ ರಚನಾ ವಿಭಾಗ, ಯೋಜನಾ ಇಲಾಖೆ | ಸದಸ್ಯ |
| (iv) | ತೋಟಗಾರಿಕೆ ನಿರ್ದೇಶಕರು | ಸದಸ್ಯ |
| (v) | ನಿರ್ದೇಶಕರು, ಎಣ್ಣೆ ತಾಳೆ ಸಂಶೋಧನಾ ನಿರ್ದೇಶನಾಲಯ, ಪೆದವಿಗಿ, ಆಂಧ್ರ ಪ್ರದೇಶ ಅಥವಾ ಅವರ ನಾಮನಿರ್ದೇಶಿತರು | ಸದಸ್ಯ |
| (vi) | ಭಾರತ ಸರ್ಕಾರದ ಕೃಷಿ ಮತ್ತು ಸಹಕಾರ ಮಂತ್ರಾಲಯ, ಎಣ್ಣೆ ಬೀಜಗಳು, ಎಣ್ಣೆ ತಾಳೆ ಮತ್ತು ಮೆಕ್ಕೆಜೋಳ ತಾಂತ್ರಿಕ ನಿಯೋಗದ ಒಬ್ಬ ಪ್ರತಿನಿಧಿ | ಸದಸ್ಯ |
| (vii) | ಎಣ್ಣೆ ತಾಳೆ ಆಯುಕ್ತರು | ಸದಸ್ಯ–ಕಾರ್ಯದರ್ಶಿ |

(2) ಯೋಜನೆ ನಿರ್ವಹಣೆ ಸಮಿತಿಯ ಯಾವುದೇ ಕಾರ್ಯ ಅಥವಾ ವ್ಯವಹರಣೆಯು, ಸಮಿತಿಯಲ್ಲಿ ಯಾವುದೇ ಸ್ಥಾನವು ಖಾಲಿ ಇರುವ ಅಥವಾ ಅದರ ರಚನೆಯಲ್ಲಿ ದೋಷವಿರುವ ಕಾರಣ ಮಾತ್ರದಿಂದಲೇ, ಅಂಥ ಕಾರ್ಯ ಅಥವಾ ವ್ಯವಹರಣೆಯು, ಅನ್ಯಥಾ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿದ್ದರೆ, ಅನೂರ್ಜಿತವಾಗತಕ್ಕದ್ದಲ್ಲ.

**4. ಯೋಜನೆ ನಿರ್ವಹಣಾ ಸಮಿತಿಯ ಪ್ರಕಾರ್ಯಗಳು.–** ಯೋಜನೆ ನಿರ್ವಹಣಾ ಸಮಿತಿಯು (ಪಿಎಂಸಿ) ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(ಎ) ಎಣ್ಣೆ ತಾಳೆ ಸಾಗುವಳಿಯ ಅಭಿವೃದ್ಧಿಗಾಗಿ ಸೂಕ್ತವಾದ ಪ್ರದೇಶಗಳ ಬಗ್ಗೆ ಸಲಹೆ ನೀಡುವುದು ಅಥವಾ ಶಿಫಾರಸ್ಸು ಮಾಡುವುದು ಅಥವಾ ಅನುಮೋದಿಸುವುದು ಹಾಗೂ ಕಾಲಕಾಲಕ್ಕೆ ಅಂಥ ಪ್ರದೇಶಗಳಿಗಾಗಿ ಸೂಕ್ತ ಉದ್ಯಮಿಗಳನ್ನು ಗುರುತಿಸುವುದು ಅಥವಾ ಆಯ್ಕೆ ಮಾಡುವುದು ಮತ್ತು ಗುರುತಿಸಲಾದ ಉದ್ಯಮಿಗಳಿಗೆ ಪ್ರದೇಶಗಳನ್ನು ಹಂಚಿಕೆ ಮಾಡುವುದು. ಅಂಥ ಉದ್ಯಮಿಗಳು ಸರ್ಕಾರದೊಂದಿಗೆ ಒಪ್ಪಂದ ಪತ್ರ ಮಾಡಿಕೊಳ್ಳುವುದು (MOA).

(ಬಿ) ಯೋಜನಾ ಸಿಬ್ಬಂದಿಯು ರಾಜ್ಯದಲ್ಲಿ ಎಣ್ಣೆ ತಾಳೆ ಅಭಿವೃದ್ಧಿ ಕಾರ್ಯಕ್ರಮ ಅನುಷ್ಠಾನದ ಪ್ರಗತಿಯನ್ನು ಪುನರೀಕ್ಷಿಸುವುದು ಮತ್ತು ಮೇಲ್ವಿಚಾರಣೆ ಮಾಡುವುದು ಹಾಗೂ ಪ್ರತಿಯೊಂದು ವಲಯದಲ್ಲಿ ಎಣ್ಣೆ ತಾಳೆಯ ಅಭಿವೃದ್ಧಿಗಾಗಿ ಸೂಕ್ತ ನಿರ್ಧಾರಗಳನ್ನು ಕೈಗೊಳ್ಳುವುದು;

(ಸಿ) ಯೋಜಿಸಲಾದ ಉದ್ದೇಶಗಳ ಅಥವಾ ಗೊತ್ತುಪಡಿಸಿರುವ ಗುರಿಗಳ ಸಂಬಂಧದಲ್ಲಿ, ಪ್ರತಿಯೊಬ್ಬ ಉದ್ಯಮಿಯ ಕಾರ್ಯನಿರ್ವಹಣೆಯ ಬಗ್ಗೆ ಕಾಲಕಾಲಕ್ಕೆ ಪುನರೀಕ್ಷಿಸುವುದು ಮತ್ತು ಒಪ್ಪಂದ ಪತ್ರದಲ್ಲಿ ರೂಪಿಸಿರುವ ಯೋಜನೆಯ ದಕ್ಷ ಕಾರ್ಯನಿರ್ವಹಣೆಯ ಹಿತದೃಷ್ಟಿಯಿಂದ ಸೂಕ್ತ ನಿರ್ಣಯಗಳನ್ನು ಕೈಗೊಳ್ಳುವುದು;

(ಡಿ) ಯೋಜನೆಯ ಅನುಷ್ಠಾನಕ್ಕಾಗಿ ಆರ್ಥಿಕ ಮತ್ತು ಆಡಳಿತಾತ್ಮಕ ಮಂಜೂರಾತಿಗಳನ್ನು ನೀಡುವುದು;

(ಇ) ನಿಯಮಿಸಬಹುದಾದ ಅಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು.

**5. ಬೆಲೆ ನಿರ್ಧರಣಾ ಸಮಿತಿಯ ರಚನೆ.–** (1) ಈ ಅಧಿನಿಯಮದ ಪ್ರಾರಂಭದ ತರುವಾಯ, ಆದಷ್ಟು ಬೇಗನೆ, ಸರ್ಕಾರವು ಅಧಿಸೂಚನೆಯ ಮೂಲಕ, ಈ ಮುಂದಿನವರನ್ನು ಒಳಗೊಂಡಿರುವ, ಒಂದು ಬೆಲೆ ನಿರ್ಧರಣಾ ಸಮಿತಿಯನ್ನು (ಪಿಎಫ್‌ಸಿ) ರಚಿಸತಕ್ಕದ್ದು, ಎಂದರೆ:–

| | | |
|---|---|---|
| (i) | ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಸಂದರ್ಭಾನುಸಾರವಾಗಿ ಕಾರ್ಯದರ್ಶಿ (ತೋಟಗಾರಿಕೆ) | ಅಧ್ಯಕ್ಷರು |
| (ii) | ತೋಟಗಾರಿಕೆ ನಿರ್ದೇಶಕರು, ಬೆಂಗಳೂರು | ಸದಸ್ಯ |
| (iii) | ಪ್ರತಿಯೊಬ್ಬ ಉದ್ಯಮಿಯಿಂದ ಸರ್ಕಾರವು ನಾಮನಿರ್ದೇಶಿಸಿದ ಒಬ್ಬ ಪ್ರತಿನಿಧಿ | ಸದಸ್ಯ |
| (iv) | ಆರ್ಥಿಕ ಇಲಾಖೆಯ ನಾಮನಿರ್ದೇಶಿಸಿದ ಉಪ ಕಾರ್ಯದರ್ಶಿ | ಸದಸ್ಯ |
| (v) | ಪ್ರತಿಯೊಂದು ಕಾರ್ಖಾನೆ ವಲಯದಿಂದ ಸರ್ಕಾರವು ನಾಮನಿರ್ದೇಶಿಸಿದ ಒಬ್ಬ ರೈತ ಪ್ರತಿನಿಧಿ | ಸದಸ್ಯ |
| (vi) | ಎಣ್ಣೆ ತಾಳೆ ಆಯುಕ್ತರು | ಸದಸ್ಯ–ಕಾರ್ಯದರ್ಶಿ |

(2) ಸರ್ಕಾರದ ಇಚ್ಛೆಗೆ ಒಳಪಟ್ಟು, ಸರ್ಕಾರೇತರ ಸದಸ್ಯನು, ನಾಮನಿರ್ದೇಶನದ ದಿನಾಂಕದಿಂದ ಮೂರು ವರ್ಷಗಳ ಅವಧಿಯವರೆಗೆ ಪದಧಾರಣವನ್ನು ಮಾಡತಕ್ಕದ್ದು. ಬೆಲೆ ನಿರ್ಧರಣಾ ಸಮಿತಿಗೆ ಒಮ್ಮೆ ನಾಮನಿರ್ದೇಶನಗೊಂಡ ಸದಸ್ಯನು ಎರಡನೇ ಅವಧಿಗೆ ಮರು ನಾಮನಿರ್ದೇಶನಕ್ಕೆ ಅರ್ಹನಾಗಿರತಕ್ಕದ್ದಲ್ಲ.

(3) ಸರ್ಕಾರೇತರ ಸದಸ್ಯನು ತಾನು ರಾಜೀನಾಮೆಯನ್ನು ನೀಡುವ ಬಗ್ಗೆ ಬರಹದ ಮೂಲಕ ಸರ್ಕಾರಕ್ಕೆ ತಿಳಿಸಿ ರಾಜೀನಾಮೆಯನ್ನು ಹಾಗೆ ನೀಡಬಹುದು, ಆದರೆ ಅವನ ರಾಜೀನಾಮೆಯು ಅಂಗೀಕಾರವಾಗುವವರೆಗೆ ಅವನು ಆ ಪದದಲ್ಲಿ ಮುಂದುವರೆಯತಕ್ಕದ್ದು.

(4) ನಿಯಮಿಸಬಹುದಾದ ಅಂಥ ಭತ್ಯೆಗಳನ್ನು ಬೆಲೆ ನಿರ್ಧರಣಾ ಸಮಿತಿಯ ಸರ್ಕಾರೇತರ ಸದಸ್ಯರು ಪಡೆಯತಕ್ಕದ್ದು.

(5) ಸರ್ಕಾರವು, ಯಾವೊಬ್ಬ ಸರ್ಕಾರೇತರ ಸದಸ್ಯನು,–

(ಎ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಬಿ) ಸರ್ಕಾರದ ಅಭಿಪ್ರಾಯದಲ್ಲಿ ಅವನು ನೈತಿಕ ಅಧ:ಪತನವನ್ನೊಳಗೊಂಡ ಅಪರಾಧದ ನಿರ್ಣೀತ ಅಪರಾಧಿಯಾಗಿದ್ದರೆ ಮತ್ತು ಕಾರಾವಾಸ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಸಿ) ಅಸ್ವಸ್ಥ ಚಿತ್ತನಾಗಿದ್ದರೆ, ಸಕ್ಷಮ ನ್ಯಾಯಾಲಯದಿಂದ ಹಾಗೆಂದು ಘೋಷಿತನಾಗಿದ್ದರೆ, ಅಥವಾ

(ಡಿ)ಕಾರ್ಯನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಇ) ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಒಂದು ಸ್ಥಳೀಯ ಪ್ರಾಧಿಕಾರ ಅಥವಾ ಸಂಸ್ಥೆ ಅಥವಾ ನಿಗಮದ ಸೇವೆಯಿಂದ ತೆಗೆದು ಹಾಕಲ್ಪಟ್ಟಿದ್ದರೆ ಅಥವಾ ವಜಾಗೊಂಡಿದ್ದರೆ; ಅಥವಾ

(ಎಫ್) ಸರ್ಕಾರದ ಅಭಿಪ್ರಾಯದಲ್ಲಿ, ಆ ವ್ಯಕ್ತಿಯನ್ನು ಆ ಹುದ್ದೆಯಲ್ಲಿ ಮುಂದುವರೆಸುವುದರಿಂದ ಸಾರ್ವಜನಿಕ ಹಿತಾಸಕ್ತಿಗೆ ಬಾಧಕವನ್ನುಂಟು ಮಾಡುವಂತೆ ಅವನು ತನ್ನ ಸದಸ್ಯ ಸ್ಥಾನವನ್ನು ದುರುಪಯೋಗ ಪಡಿಸಿಕೊಂಡಿದ್ದರೆ,

– ಅವನನ್ನು ಪದದಿಂದ ತೆಗೆದು ಹಾಕಬಹುದು:

ಪರಂತು, ಈ ಖಂಡದ ಅಡಿಯಲ್ಲಿ ಯಾವೊಬ್ಬ ವ್ಯಕ್ತಿಯನ್ನು, ಸದರಿ ವಿಷಯಕ್ಕೆ ಸಂಬಂಧಿಸಿದಂತೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ನೀಡದ ಹೊರತು, ತೆಗೆದುಹಾಕತಕ್ಕದ್ದಲ್ಲ.

(6) (5)ನೇ ಉಪಪ್ರಕರಣದ ಅಡಿಯಲ್ಲಿ ಅಥವಾ ಅನ್ಯಥಾ ಉಂಟಾಗುವ ಖಾಲಿ ಸ್ಥಾನವನ್ನು ಹೊಸ ನಾಮನಿರ್ದೇಶನದ ಮೂಲಕ ಭರ್ತಿ ಮಾಡತಕ್ಕದ್ದು.

(7) ಬೆಲೆ ನಿರ್ಧರಣಾ ಸಮಿತಿಯ ಯಾವುದೇ ಕಾರ್ಯ ಅಥವಾ ವ್ಯವಹರಣೆಯು ಬೆಲೆ ನಿರ್ಧರಣಾ ಸಮಿತಿಯಲ್ಲಿ ಯಾವುದೇ ಸ್ಥಾನವು ಖಾಲಿ ಇರುವ ಅಥವಾ ಅದರ ರಚನೆಯಲ್ಲಿ ದೋಷವಿರುವ ಕಾರಣ ಮಾತ್ರದಿಂದಲೇ ಅಂಥ ಕಾರ್ಯ ಅಥವಾ ವ್ಯವಹರಣೆಯು ಅನ್ಯಥಾ ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿದ್ದರೆ ಅನೂರ್ಜಿತವಾಗತಕ್ಕದ್ದಲ್ಲ.

(8) ತಾಂತ್ರಿಕ ಸಮಿತಿಯು ಸರ್ಕಾರಕ್ಕೆ ಸಲ್ಲಿಸಿದ ವರದಿಯನ್ನು ಆಧರಿಸಿ ತಾಜಾ ಹಣ್ಣು ಗೊಂಚಲಿಗೆ ಸಂಬಂಧಿಸಿದಂತೆ ಕನಿಷ್ಠ ಬೆಂಬಲ ಬೆಲೆಗೆ (MSP) ಪ್ರಸ್ತಾವವನ್ನು ಕಾಲಕಾಲಕ್ಕೆ ಸಲ್ಲಿಸುವ ಅಧಿಕಾರ.

**6. ಬೆಲೆ ನಿರ್ಧರಣಾ ಸಮಿತಿಯ ಪ್ರಕಾರ್ಯಗಳು.**–(1) ಬೆಲೆ ನಿರ್ಧರಣಾ ಸಮಿತಿಯು (ಪಿಎಫ್‌ಸಿ) ಈ ಮುಂದಿನ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ:–

(ಎ) ಕಾರ್ಖಾನೆಯು ಮಾರಾಟ ಮಾಡುತ್ತಿರುವ ಎಣ್ಣೆ ತಾಳೆ ತಾಜಾ ಹಣ್ಣು ಗೊಂಚಲಿನಿಂದ ಉತ್ಪಾದಿಸಿದ ಕಚ್ಚಾ ತಾಳೆ ಎಣ್ಣೆಯ ಬೆಲೆಗಳನ್ನು;

(ಬಿ) ತಾಜಾ ಹಣ್ಣು ಗೊಂಚಲಿನಿಂದ ಎಣ್ಣೆಯನ್ನು ಪಡೆಯುವುದನ್ನು;

(ಸಿ) ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮತ್ತು ದೇಶದಲ್ಲಿನ ಇತರೆ ರಾಜ್ಯಗಳಲ್ಲಿ ಕಚ್ಚಾ ತಾಳೆ ಎಣ್ಣೆಯ ಬೆಲೆಗಳನ್ನು,

– ಗಮನದಲ್ಲಿಟ್ಟುಕೊಂಡು ಎಣ್ಣೆ ತಾಳೆ ತಾಜಾ ಹಣ್ಣು ಗೊಂಚಲುಗಳ ಖರೀದಿಗಾಗಿ ಬೆಲೆಯನ್ನು ಶಿಫಾರಸ್ಸು ಮಾಡುವುದು ಅಥವಾ ಅನುಮೋದನೆ ನೀಡುವುದು;

(2) ತಾಜಾ ಹಣ್ಣು ಗೊಂಚಲಿನ ಬೆಲೆಯನ್ನು ನಿಗದಿಗೊಳಿಸಲು ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸಲು ನಾಲ್ಕು ತಿಂಗಳಿಗೊಮ್ಮೆ ಸಭೆಯನ್ನು ಕರೆಯುವುದು.

(3) ನಿಯಮಿಸಬಹುದಾದ ಅಂಥ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದು.

(4) ಯಾವೊಬ್ಬ ವ್ಯಕ್ತಿಯು, (1)ನೇ ಉಪಪ್ರಕರಣದಡಿಯಲ್ಲಿ ನಿರ್ದಿಷ್ಟಪಡಿಸಿದ ಬೆಲೆಗಿಂತ ಕಡಿಮೆ/ಹೆಚ್ಚಿನ ಬೆಲೆಯಲ್ಲಿ ಕಾರ್ಖಾನೆಯ ಉದ್ಯಮಿಗೆ/ಅಧಿಭೋಗದಾರನಿಗೆ ಎಣ್ಣೆ ತಾಳೆ ತಾಜಾ ಹಣ್ಣನ್ನು ಮಾರಾಟ ಮಾಡತಕ್ಕದ್ದಲ್ಲ ಅಥವಾ ಮಾರಾಟ ಮಾಡಲು ಒಪ್ಪಿಕೊಳ್ಳತಕ್ಕದ್ದಲ್ಲ ಮತ್ತು ಯಾವೊಬ್ಬ ಅಂಥ ಉದ್ಯಮಿಯು/ಅಧಿಭೋಗದಾರನು ತಾಜಾ ಹಣ್ಣು ಗೊಂಚಲಿನ ಖರೀದಿಯನ್ನು ಮಾಡತಕ್ಕದ್ದಲ್ಲ ಅಥವಾ ಖರೀದಿಯನ್ನು ಮಾಡಲು ಒಪ್ಪಿಕೊಳ್ಳತಕ್ಕದ್ದಲ್ಲ.

**7. ಎಣ್ಣೆ ತಾಳೆ ಆಯುಕ್ತರು ಮತ್ತು ಎಣ್ಣೆ ತಾಳೆ ಪರಿಶೀಲಕರ ನೇಮಕಾತಿ.–** (1) ಸರ್ಕಾರವು, ಈ ಅಧಿನಿಯಮದಡಿಯಲ್ಲಿ ಎಣ್ಣೆ ತಾಳೆ ಆಯುಕ್ತರಾಗಿ ಅಧಿಕಾರಗಳನ್ನು ಚಲಾಯಿಸಲು ಮತ್ತು ಎಣ್ಣೆ ತಾಳೆ ಆಯುಕ್ತರ ಪ್ರಕಾರ್ಯಗಳನ್ನು ನಿರ್ವಹಿಸಲು, ತೋಟಗಾರಿಕೆ ಇಲಾಖೆಯ ಅಪರ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ತೋಟಗಾರಿಕಾ ಇಲಾಖೆಯ ಒಬ್ಬ ಅಧಿಕಾರಿಯನ್ನು ನೇಮಕ ಮಾಡತಕ್ಕದ್ದು.

(2) ಸರ್ಕಾರವು, ತೋಟಗಾರಿಕಾ ಇಲಾಖೆಯ ಹಿರಿಯ ಸಹಾಯಕ ನಿರ್ದೇಶಕರು ಅಥವಾ ತೋಟಗಾರಿಕಾ ಇಲಾಖೆಯ ಸಹಾಯಕ ನಿರ್ದೇಶಕರು ಅಥವಾ ಸಂದರ್ಭಾನುಸಾರವಾಗಿ ಸಹಾಯಕ ತೋಟಗಾರಿಕಾ ಅಧಿಕಾರಿಗಳನ್ನು ಈ ಅಧಿನಿಯಮದಡಿಯಲ್ಲಿ, ಎಣ್ಣೆ ತಾಳೆ ಪರಿಶೀಲಕರ ಅಧಿಕಾರಗಳನ್ನು ಚಲಾಯಿಸಲು ಮತ್ತು ಪ್ರಕಾರ್ಯಗಳನ್ನು ನಿರ್ವಹಿಸಲು ಅವರುಗಳಿಗೆ ಸಂಬಂಧಪಟ್ಟ ಅಧಿಕಾರ ವ್ಯಾಪ್ತಿಯ ಪ್ರದೇಶಗಳೊಳಗೆ ಎಣ್ಣೆ ತಾಳೆ ಪರಿಶೀಲಕರನ್ನಾಗಿ ನೇಮಕ ಮಾಡತಕ್ಕದ್ದು.

**8. ಎಣ್ಣೆ ತಾಳೆ ಆಯುಕ್ತರ ಅಧಿಕಾರ.–** ಎಣ್ಣೆ ತಾಳೆ ಆಯುಕ್ತರು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು, ಎಂದರೆ:–

(i) ತಾಳೆ ಎಣ್ಣೆಯ ಉತ್ಪಾದನೆ ಮತ್ತು ಸಂಸ್ಕರಣೆಯಲ್ಲಿ ನಿರತರಾಗಿರುವ ಎಣ್ಣೆ ತಾಳೆ ಬೆಳೆಗಾರರು ಮತ್ತು ಕೈಗಾರಿಕೆಗಳು/ಉದ್ಯಮಿಗಳ ಕಾರ್ಯ ಚಟುವಟಿಕೆಗಳನ್ನು ಸಮನ್ವಯಗೊಳಿಸುವುದು;

(ii) ರಾಜ್ಯದಲ್ಲಿ ಎಣ್ಣೆ ತಾಳೆಯ ಅಭಿವೃದ್ಧಿಗಾಗಿ ನೋಡಲ್ ಅಧಿಕಾರಿ/ಮೇಲ್ವಿಚಾರಣಾ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು;

(iii) ಎಣ್ಣೆತಾಳೆಯ ಅಭಿವೃದ್ಧಿಯಲ್ಲಿ ಪ್ರತಿಯೊಬ್ಬ ಉದ್ಯಮಿಯು ಸಾಧಿಸಿದ ಪ್ರಗತಿಯನ್ನು ಮೇಲ್ವಿಚಾರಣೆ ಮಾಡುವುದು ಮತ್ತು ನಿರ್ಧಾರಗಳನ್ನು ತೆಗೆದುಕೊಳ್ಳಲು ಯೋಜನೆ ನಿರ್ವಹಣಾ ಸಮಿತಿಗೆ ಸೂಕ್ತ ಶಿಫಾರಸ್ಸುಗಳನ್ನು ಮಾಡುವುದು;

(iv) ನಿಯಮಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸುವುದು.

**9. ಎಣ್ಣೆ ತಾಳೆ ಪರಿಶೀಲಕರ ಅಧಿಕಾರ.–** ಎಣ್ಣೆ ತಾಳೆ ಪರಿಶೀಲಕರು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು, ಎಂದರೆ:–

(i) ಎಣ್ಣೆ ತಾಳೆ ಆಯುಕ್ತರು ತಮ್ಮ ಅಧಿಕಾರಗಳನ್ನು ಚಲಾಯಿಸುವಲ್ಲಿ ಮತ್ತು ತಮ್ಮ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಅವರಿಗೆ ನೆರವು ನೀಡುವುದು;

(ii) ಯೋಜನೆ ನಿರ್ವಹಣಾ ಸಮಿತಿಯು ಮತ್ತು ಎಣ್ಣೆ ತಾಳೆ ಆಯುಕ್ತರು ತನಗೆ ಪ್ರತ್ಯಾಯೋಜಿಸಿದ ಅಂಥ ಅಧಿಕಾರಗಳನ್ನು ಚಲಾಯಿಸುವುದು; ಮತ್ತು

(iii) ನಿಯಮಿಸಬಹುದಾದ ಅಂಥ ಇತರ ಅಧಿಕಾರಗಳನ್ನು ಚಲಾಯಿಸುವುದು.

**10. ಯೋಜನೆ ನಿರ್ವಹಣಾ ಸಮಿತಿ ಮತ್ತು ಬೆಲೆ ನಿರ್ಧರಣಾ ಸಮಿತಿಗಳ ಸಭೆಗಳು.–** (1) ಯೋಜನೆ ನಿರ್ವಹಣಾ ಸಮಿತಿ ಅಥವಾ ಬೆಲೆ ನಿರ್ಧರಣಾ ಸಮಿತಿಗಳ ಸಭೆಗಳನ್ನು ಸಂಬಂಧಪಟ್ಟ ಸಮಿತಿಯ ಅಧ್ಯಕ್ಷರು ಕರೆಯಬಹುದು.

(2) ಯೋಜನೆ ನಿರ್ವಹಣಾ ಸಮಿತಿ ಅಥವಾ ಬೆಲೆ ನಿರ್ಧರಣಾ ಸಮಿತಿಯ ಅಧ್ಯಕ್ಷರು, ತಾವು ಅವಶ್ಯಕವೆಂದು ಭಾವಿಸಿದಲ್ಲಿ ವಿಶೇಷ ಸಭೆಯನ್ನು ಕರೆಯಬಹುದು.

(3) ಯೋಜನೆ ನಿರ್ವಹಣಾ ಸಮಿತಿಯ ಅಥವಾ ಬೆಲೆ ನಿರ್ಧರಣಾ ಸಮಿತಿಯ ಸಭೆಯಲ್ಲಿನ ಕೋರಂ ಮತ್ತು ಸಭೆಯಲ್ಲಿನ ಕಾರ್ಯ ವಿಧಾನವು ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಯೋಜನೆ ನಿರ್ವಹಣಾ ಸಮಿತಿಯ ಅಥವಾ ಬೆಲೆ ನಿರ್ಧರಣಾ ಸಮಿತಿಯ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ಸಂದರ್ಭಾನುಸಾರವಾಗಿ ಅದರ ಅಧ್ಯಕ್ಷರೇ ವಹಿಸಿಕೊಳ್ಳತಕ್ಕದ್ದು ಮತ್ತು ಯಾವುದೇ ಕಾರಣಕ್ಕಾಗಿ ಅಧ್ಯಕ್ಷರು ಸಭೆಗೆ ಹಾಜರಾಗಲು ಸಾಧ್ಯವಾಗದಿದ್ದಲ್ಲಿ, ಅಧ್ಯಕ್ಷರು ನಾಮನಿರ್ದೇಶಿಸಿದ ಯಾವೊಬ್ಬ ಇತರ ಸದಸ್ಯನು ಅಥವಾ ಸಭೆಯಲ್ಲಿ ಹಾಜರಿರುವ ಸದಸ್ಯರು ಆಯ್ಕೆ ಮಾಡಿದ ಯಾವೊಬ್ಬ ಇತರ ಸದಸ್ಯನು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

**11. ಎಣ್ಣೆ ತಾಳೆ ಬೆಳೆಗಾರರ ನೋಂದಣಿ.–** (1) ಕಾರ್ಖಾನೆ ವಲಯದಲ್ಲಿನ ಕಾರ್ಖಾನೆಯ ಪ್ರತಿಯೊಬ್ಬ ಉದ್ಯಮಿ/ಅಧಿಭೋಗದಾರನು ಕಾರ್ಖಾನೆಗೆ ಹೊಂದಿಕೊಂಡ ವಲಯದಲ್ಲಿ ಎಣ್ಣೆ ತಾಳೆ ಬೆಳೆಗಾರರ ಒಂದು ರಿಜಿಸ್ಟರನ್ನು, ನಿಯಮಿಸಬಹುದಾದ ಅಂಥ ನಮೂನೆಯಲ್ಲಿ ಮತ್ತು ಅಂಥ ವಿಧಾನದಲ್ಲಿ ನಿರ್ವಹಿಸತಕ್ಕದ್ದು. ರಿಜಿಸ್ಟರನ್ನು ಪ್ರತಿ ವರ್ಷ ಇಂದೀಕರಿಸತಕ್ಕದ್ದು ಮತ್ತು ಇದು, ಎಣ್ಣೆ ತಾಳೆ ಆಯುಕ್ತರು ಅಥವಾ ಎಣ್ಣೆ ತಾಳೆ ಪರಿಶೀಲಕರು ನಡೆಸುವ ಪರಿಶೀಲನೆಗೆ ಕಾರ್ಖಾನೆಯ ಕಚೇರಿಯಲ್ಲಿ ಯಾವಾಗಲೂ ಲಭ್ಯವಾಗುವಂತೆ ಇಟ್ಟಿರತಕ್ಕದ್ದು.

(2) ಎಣ್ಣೆ ತಾಳೆ ಪರಿಶೀಲಕರು, ಉದ್ಯಮಿಯ ಕಚೇರಿ/ಕಾರ್ಖಾನೆಯನ್ನು ಯಾವುದೇ ಸಮಯದಲ್ಲಿ ಪರಿಶೀಲಿಸಬಹುದು ಮತ್ತು ನಿರ್ವಹಿಸಲು ಅಗತ್ಯಪಡಿಸಬಹುದಾದ ಅಂಥ ದಾಖಲೆಗಳು, ವರದಿಗಳು, ವಿವರಪಟ್ಟಿಗಳು ಮತ್ತು ರಿಜಿಸ್ಟರುಗಳನ್ನು ಪರಿಶೀಲಿಸಬಹುದು ಮತ್ತು ತಾವು ಸತ್ಯಾಪನೆ ಮಾಡಲು ಅವುಗಳನ್ನು ಹಾಜರುಪಡಿಸಲು ಕಾರ್ಖಾನೆಯ ಉದ್ಯಮಿ/ಅಧಿಭೋಗದಾರನನ್ನು ನಿರ್ದೇಶಿಸಬಹುದು.

**12. ಕಾರ್ಖಾನೆ ವಲಯದ ಘೋಷಣೆ.–** (1) ಯೋಜನೆ ನಿರ್ವಹಣಾ ಸಮಿತಿಯು, ಈ ಉದ್ದೇಶಕ್ಕಾಗಿ ನಿರ್ದಿಷ್ಟಪಡಿಸಲಾದ ಕಾರ್ಖಾನೆಗೆ ತಾಜಾ ಎಣ್ಣೆ ತಾಳೆಯ ತಾಜಾ ಹಣ್ಣಿನ ಗೊಂಚಲುಗಳನ್ನು ಸರಬರಾಜು ಮಾಡುವ ಅಥವಾ ಎಣ್ಣೆ ತಾಳೆಯ ತಾಜಾ ಹಣ್ಣಿನ ಗೊಂಚಲುಗಳನ್ನು ಮತ್ತು ಯಾವುದೇ ಇತರ ಎಣ್ಣೆತಾಳೆ ಉತ್ಪನ್ನವನ್ನು ಕಾರ್ಖಾನೆಯು ಖರೀದಿಸುವ ಉದ್ದೇಶಕ್ಕಾಗಿ ಯಾವುದೇ ಪ್ರದೇಶವನ್ನು ಕಾರ್ಖಾನೆಯ ವಲಯವೆಂದು ಅಧಿಸೂಚಿಸಬಹುದು.

(2) ಯಾವುದೇ ನಿರ್ದಿಷ್ಟ ಪ್ರದೇಶವನ್ನು (1)ನೇ ಉಪಪ್ರಕರಣದಡಿಯಲ್ಲಿ ಕಾರ್ಖಾನೆ ವಲಯವೆಂದು ಅಧಿಸೂಚಿಸಿದ್ದರೆ, ಆ ಪ್ರದೇಶದಲ್ಲಿಯ ಎಣ್ಣೆ ತಾಳೆ ಬೆಳೆಗಾರರು, ಬೆಳೆಯುವ ಎಣ್ಣೆ ತಾಳೆ ನೆಡುತೋಪುಗಳಿಂದ (ಪ್ಲಾಂಟೇಷನ್) ಎಣ್ಣೆ ತಾಳೆ ತಾಜಾ ಹಣ್ಣು ಗೊಂಚಲುಗಳನ್ನು ಕಾರ್ಖಾನೆ ವಲಯಕ್ಕೆ ಹೊಂದಿಕೊಂಡಂಥ, ಆ ವಲಯದಲ್ಲಿಯ ಕಾರ್ಖಾನೆಗೆ ಮಾತ್ರ ಪೂರೈಕೆ ಮಾಡತಕ್ಕದ್ದು.

(3) ಯಾವುದೇ ನಿರ್ದಿಷ್ಟ ಕಾರ್ಖಾನೆ ವಲಯವನ್ನು (1)ನೇ ಉಪಪ್ರಕರಣದ ಅಡಿಯಲ್ಲಿ ಅಧಿಸೂಚಿಸಿದ್ದರೆ, ಅದಕ್ಕೆ ಸಂಬಂಧಪಟ್ಟ ಕಾರ್ಖಾನೆ ವಲಯದಲ್ಲಿ ಕಾರ್ಖಾನೆ ಎಣ್ಣೆ ತಾಳೆ ಉದ್ಯಮಿ/ಅಧಿಭೋಗದಾರನು, ಈ ಅಧಿನಿಯಮದಡಿಯಲ್ಲಿ ಬೆಲೆ ನಿರ್ಧರಣಾ ಸಮಿತಿಯು ನಿರ್ಧರಿಸಿದ ಬೆಲೆಯಲ್ಲಿ ಅವುಗಳನ್ನು ಮಾರಾಟ ಮಾಡುವುದಕ್ಕಾಗಿ ಒಪ್ಪಿಸಿದಂಥ ಆ ಕಾರ್ಖಾನೆ ವಲಯದಲ್ಲಿ ಎಣ್ಣೆ ತಾಳೆ ಬೆಳೆಗಾರರು ಬೆಳೆದ ಎಲ್ಲಾ ಎಣ್ಣೆ ತಾಳೆ ತಾಜಾ ಹಣ್ಣುಗೊಂಚಲನ್ನು ಖರೀದಿಸತಕ್ಕದ್ದು.

(4) ಉದ್ಯಮಿಯು, ಆ ಪ್ರದೇಶವನ್ನು ಅವರಿಗೆ ಹಂಚಿಕೆ ಮಾಡಿದ ಮೂರು ವರ್ಷಗಳೊಳಗೆ ಎಣ್ಣೆ ತಾಳೆ ಸಂಸ್ಕರಣಾ ಘಟಕವನ್ನು ಸ್ಥಾಪಿಸತಕ್ಕದ್ದು ಮತ್ತು ಗಿರಣಿಯನ್ನು ಸ್ಥಾಪಿಸುವಲ್ಲಿ ಕೈಗೊಂಡ ಕ್ರಮದ ಬಗ್ಗೆ ಎಣ್ಣೆ ತಾಳೆ ಆಯುಕ್ತರಿಗೆ ತಿಳಿಸತಕ್ಕದ್ದು. ಉದ್ಯಮಿಯು, ಕಾಲಮಿತಿಯೊಳಗೆ ಎಣ್ಣೆ ಸಂಸ್ಕರಣಾ ಘಟಕವನ್ನು ಆರಂಭಿಸದಿದ್ದ ಸಂದರ್ಭದಲ್ಲಿ ಬೆಲೆ ನಿರ್ಧರಣಾ ಸಮಿತಿಯು ನಿರ್ಧರಿಸಿದ ದರಗಳಲ್ಲಿಯೇ ತಮಗೆ ಹಂಚಿಕೆ ಮಾಡಿದ್ದ ಪ್ರದೇಶದಲ್ಲಿನ ತಾಜಾ ಹಣ್ಣು ಗೊಂಚಲುಗಳ ಖರೀದಿಯನ್ನು ಮಾಡತಕ್ಕದ್ದು ಮತ್ತು ತಾಜಾ ಹಣ್ಣು ಗೊಂಚಲುಗಳ ತೂಕದಲ್ಲಿ ನಷ್ಟವುಂಟಾಗದಂತೆ ಸಂಸ್ಕರಣೆ ಮಾಡಲು ವ್ಯವಸ್ಥೆ ಮಾಡತಕ್ಕದ್ದು ಮತ್ತು ಉದ್ಯಮಿಯು, ಒಪ್ಪಂದ ಪತ್ರದ ಮೂಲಕ ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳ ಮೇರೆಗಿನ ಕ್ರಮಗಳಿಗೆ ಒಳಪಟ್ಟಿರತಕ್ಕದ್ದು.

**13. ಕಾರ್ಖಾನೆಯ ಉದ್ಯಮಿ/ಅಧಿಭೋಗದಾರರಿಂದ ತಾಜಾ ಹಣ್ಣಿನ ಗೊಂಚಲುಗಳನ್ನು (ಎಸ್‌ಎಫ್‌ಬಿ) ಖರೀದಿಸಲು ತಪ್ಪುವುದು.–** (1) ಕಾರ್ಖಾನೆಯ ಉದ್ಯಮಿ/ಅಧಿಬೋಗದಾರನು, ಯಾವುದೇ ಸರಿಯಾದ ಕಾರಣಗಳಿಲ್ಲದೆ, ಕಾರ್ಖಾನೆಗೆ ಸಂಬಂಧಿಸಿದಂತೆ ಅಧಿಸೂಚಿಸಲಾದ ಕಾರ್ಖಾನೆ ವಲಯದಲ್ಲಿರುವ ಎಣ್ಣೆ ತಾಳೆ ಬೆಳೆಗಾರರಿಂದ ಎಲ್ಲಾ ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲುಗಳನ್ನು ಖರೀದಿಸಲು ತಪ್ಪಿದಲ್ಲಿ, ಕಾರ್ಖಾನೆಯ ಅಂಥ ಎಣ್ಣೆ ತಾಳೆ ಉದ್ಯಮಿ/ಅಧಿಭೋಗದಾರನು, 18ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ದಂಡದ ಜೊತೆಗೆ, ಎಣ್ಣೆ ತಾಳೆ ಆಯುಕ್ತರು ನಿರ್ದಿಷ್ಟಪಡಿಸಬಹುದಾದಂತೆ, ಎಣ್ಣೆ ತಾಳೆ ಬೆಳೆಗಾರರಿಗೆ ಉಂಟಾಗಬಹುದಾದ ನಷ್ಟವನ್ನು ಭರಿಸಲು ಹೊಣೆಗಾರರಾಗಿರತಕ್ಕದ್ದು:

ಪರಂತು, ಕಾರ್ಖಾನೆಯ ಉದ್ಯಮಿ/ಅಧಿಭೋಗದಾರನು, ಎಣ್ಣೆ ತಾಳೆ ಆಯುಕ್ತರು ನಷ್ಟ ಪರಿಹಾರವನ್ನು ನಿರ್ಧರಿಸುವುದಕ್ಕೆ ಮೊದಲು, ಎಣ್ಣೆ ತಾಳೆ ಬೆಳೆಗಾರರಿಂದ ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲುಗಳ ನಿರ್ದಿಷ್ಟ ರವಾನೆ ಸರಕನ್ನು ಖರೀದಿಸಲು ನಿರಾಕರಿಸಿದ್ದಕ್ಕೆ ಕಾರಣಗಳನ್ನು ನೀಡತಕ್ಕದ್ದು:

ಮತ್ತು ಪರಂತು, ಸ್ಥಾವರ/ಯಂತ್ರದ ಹಾನಿ, ಅಸಮರ್ಪಕ ಕಾರ್ಯನಿರ್ವಹಣೆ, ಕೆಟ್ಟುಹೋಗುವಿಕೆ, ಸಾಮರ್ಥ್ಯಗಳ ಬಳಕೆಯ ವಿಫಲತೆ ಮತ್ತು ಇತರ ಯಾವುದೇ ಕಾರ್ಯಾಚರಣೆಯ ಸಮಸ್ಯೆಗಳಂಥ ಕಾರಣಗಳು, ತಾಳೆ ಎಣ್ಣೆ ತಾಜಾ ಹಣ್ಣಿನ ಗೊಂಚಲುಗಳ ರವಾನಿಸಿದ ಸರಕನ್ನು ಖರೀದಿಸಲು ನಿರಾಕರಿಸುವುದಕ್ಕೆ ಸಿಂಧುವಾದ ಕಾರಣಗಳಾಗತಕ್ಕದ್ದಲ್ಲ ಮತ್ತು ಅದನ್ನು ವಿಫಲತೆ ಎಂದು ಭಾವಿಸತಕ್ಕದ್ದು.

ಅಲ್ಲದೆ ಪರಂತು, ಎಣ್ಣೆ ತಾಳೆ ತಾಜಾ ಹಣ್ಣು ಗೊಂಚಲುಗಳನ್ನು ಖರೀದಿಸಲು ತಪ್ಪುವುದಕ್ಕೆ ಎಣ್ಣೆ ತಾಳೆ ಉದ್ಯಮಿ/ಅಧಿಭೋಗದಾರನಿಗೆ ಸರಿಯಾದ ಕಾರಣಗಳಿವೆಯೇ ಎಂಬ ಬಗ್ಗೆ ಯಾವುದೇ ವಿವಾದವಿದ್ದರೆ, ಅಂಥ ವಿವಾದವನ್ನು ನಿರ್ಧರಿಸಲು ಎಣ್ಣೆ ತಾಳೆ ಆಯುಕ್ತರು ಸಕ್ಷಮರಾಗಿರತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಎಣ್ಣೆ ತಾಳೆ ಆಯುಕ್ತರ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅಂಥ ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ಸರ್ಕಾರಕ್ಕೆ ಅಪೀಲನ್ನು ಹೂಡತಕ್ಕದ್ದು.

**14. ಯೋಚಿಸಿದ ಉದ್ದೇಶಗಳನ್ನು/ ಗೊತ್ತುಪಡಿಸಿರುವ ಗುರಿಗಳನ್ನು ಸಾಧಿಸುವಲ್ಲಿ ತಪ್ಪುವುದು.–** ಎಣ್ಣೆ ತಾಳೆ ಆಯುಕ್ತರು ಕಾಲಕಾಲಕ್ಕೆ ಯೋಚಿಸಿದ ಉದ್ದೇಶಗಳನ್ನು ಅಥವಾ ಗೊತ್ತುಪಡಿಸಿರುವ ಗುರಿಗಳನ್ನು ಸಾಧಿಸುವಲ್ಲಿ ಉದ್ಯಮಿಯು ತಪ್ಪಿದಲ್ಲಿ, ಯೋಜನೆ ನಿರ್ವಹಣಾ ಸಮಿತಿಯು, ತನ್ನ ಸಭೆಯಲ್ಲಿ ಇದರ ತಪ್ಪುವಿಕೆಯನ್ನು ಪರಿಶೀಲಿಸುವ ಹಕ್ಕನ್ನು ಕಾಯ್ದಿರಿಸುತ್ತದೆ ಮತ್ತು ಅದಕ್ಕೆ ಮನವರಿಕೆಯಾದರೆ, ಯೋಚಿಸಿದ ಉದ್ದೇಶಗಳನ್ನು ಅಥವಾ ಗೊತ್ತುಪಡಿಸಿರುವ ಗುರಿಗಳನ್ನು ಸಾಧಿಸುವಲ್ಲಿ ತಮ್ಮ ಕಳಪೆ ನಿರ್ವಹಣೆಯನ್ನು ವಿವರಿಸಲು ಉದ್ಯಮಿಗೆ ಸಾಕಷ್ಟು ಅವಕಾಶವನ್ನು ಕೊಟ್ಟ ತರುವಾಯ, ಅಂಥ ಕಾರ್ಯನಿರ್ವಹಿಸದ ಉದ್ಯಮಿಗಳ ಪ್ರದೇಶ ಹಂಚಿಕೆ ಹಕ್ಕನ್ನು ರದ್ದುಗೊಳಿಸಬಹುದು.

**15. ಉದ್ಯಮಿಗಳಿಗೆ ಹಂಚಿಕೆ/ಮರು ಹಂಚಿಕೆಯಾದ ಪ್ರದೇಶಗಳನ್ನು ರದ್ದುಗೊಳಿಸುವ ಅಧಿಕಾರ.–** ಯೋಜನೆ ನಿರ್ವಹಣೆ ಸಮಿತಿಯು, 14ನೇ ಪ್ರಕರಣದ ಅಡಿಯಲ್ಲಿ ಉದ್ಯಮಿಯು ಸಲ್ಲಿಸಿದ ವಿವರಣೆಯನ್ನು ಪರಿಶೀಲಿಸಿದ ನಂತರ ಮತ್ತು ಉದ್ಯಮಿಯ ಕಳಪೆ ನಿರ್ವಹಣೆಗೆ ನೀಡಿದ ವಿವರಣೆಯು ತೃಪ್ತಿಕರವಾಗಿಲ್ಲವೆಂದು ಮನಗಂಡರೆ, 18ನೇ ಪ್ರಕರಣದ ಅಡಿಯಲ್ಲಿ ದಂಡ ವಿಧಿಸುವ ನಿರ್ಣಯವನ್ನು ಕೈಗೊಳ್ಳಬಹುದು ಅಥವಾ ಅಂಥ ಉದ್ಯಮಿಯಿಂದ ಪ್ರದೇಶ ಹಂಚಿಕೆಯನ್ನು ಹಿಂದಕ್ಕೆ ಪಡೆಯಬಹುದು. ಪ್ರದೇಶ ಹಂಚಿಕೆಯಲ್ಲಿ/ನಿರ್ವಹಣೆ ನಿರ್ಧರಣೆಯಲ್ಲಿ/ಹಂಚಿಕೆಯಾದ ಪ್ರದೇಶವನ್ನು ರದ್ದುಗೊಳಿಸುವಲ್ಲಿ/ ಮತ್ತೊಬ್ಬ ಉದ್ಯಮಿಗೆ ಹೊಸ ಪ್ರದೇಶವನ್ನು ಮರುಹಂಚಿಕೆ ಮಾಡುವಲ್ಲಿ ಯೋಜನೆ ನಿರ್ವಹಣೆ ಸಮಿತಿಯ ತೀರ್ಮಾನವು ಅಂತಿಮವಾಗಿರತಕ್ಕದ್ದು.

**16. ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲುಗಳಿಗೆ ದರ ಸಂದಾಯ.–** (1) ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲುಗಳನ್ನು ಬಟವಾಡೆ ಮಾಡಿದ ನಂತರ ಕಾರ್ಖಾನೆಯ ಉದ್ಯಮಿ/ಅಧಿಭೋಗದಾರನು, ಪ್ರತಿಯೊಂದು ತಿಂಗಳಿನ 10ನೇ ತಾರೀಖಿಗಿಂತ ಮೊದಲು, ಹಾಗೆ ಸರಬರಾಜು ಮಾಡಲಾದ ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲುಗಳಿಗೆ ಬೆಲೆ ನಿರ್ಧರಣಾ ಸಮಿತಿಯು ನಿಗದಿಪಡಿಸಿದ ದರದ ಪ್ರಕಾರ ದರವನ್ನು ಸಂದಾಯಮಾಡತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಅವಧಿ ಮುಕ್ತಾಯವಾದ ಮೇಲೆ ಸಂದಾಯ ಮಾಡದೆ ಉಳಿದಿರುವ ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲುಗಳ ದರಗಳಿಗೆ, ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲುಗಳನ್ನು ಬಟವಾಡೆ ಮಾಡಿದ ದಿನಾಂಕದಿಂದ ವರ್ಷಕ್ಕೆ ಶೇಕಡಾ ಹದಿನೈದರ ದರದಲ್ಲಿ ಬಡ್ಡಿಯನ್ನು ಸೇರಿಸತಕ್ಕದ್ದು ಮತ್ತು ಅದನ್ನು ಭೂಕಂದಾಯದ ಬಾಕಿಯಾಗಿದಿದ್ದರೆ ಹೇಗೋ ಹಾಗೆ ಎಣ್ಣೆ ತಾಳೆ ಉದ್ಯಮಿ/ಕಾರ್ಖಾನೆಯ ಅಧಿಭೋಗದಾರನಿಂದ ವಸೂಲಿ ಮಾಡತಕ್ಕದ್ದು.

(3) ಕಂಪನಿಯು, ರೈತರಿಗೆ ಮಾಡಲಾದ ಸಂದಾಯದ ವಿವರಗಳನ್ನು ಒಳಗೊಂಡಿರುವ ಲೆಕ್ಕಗಳ ವಿವರಣೆಯನ್ನು ಪ್ರತೀ ತಿಂಗಳಿನ 5ನೇ ತಾರೀಖಿನೊಳಗೆ ನಿಯಮಿಸಲಾದ ನಮೂನೆಯಲ್ಲಿ ಬೆಲೆ ನಿರ್ಧರಣೆ ಸಮಿತಿಗೆ ಅಥವಾ ಎಣ್ಣೆ ತಾಳೆ ಆಯುಕ್ತರಿಗೆ ಸಲ್ಲಿಸತಕ್ಕದ್ದು.

**17. ವರದಿ.–** ಯೋಜನೆ ನಿರ್ವಹಣೆ ಸಮಿತಿಯು ಮತ್ತು ಬೆಲೆ ನಿರ್ಧರಣೆ ಸಮಿತಿಯು, ನಿಯಮಿಸಬಹುದಾದ ಅಂಥ ದಿನಾಂಕದೊಳಗೆ, ಅಂಥ ನಮೂನೆಯಲ್ಲಿ ಹಾಗೂ ಅಂಥ ಅವಧಿಯಲ್ಲಿ ರಾಜ್ಯದಲ್ಲಿರುವ ಎಣ್ಣೆ ತಾಳೆ ಅಭಿವೃದ್ಧಿ ಯೋಜನೆಯ ಪ್ರಗತಿಯ ಬಗ್ಗೆ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.

**18. ದಂಡಗಳು.–** ಈ ಅಧಿನಿಯಮ ಅಥವಾ ಅದರ ಅಡಿಯಲ್ಲಿ ರೂಪಿಸಲಾದ ಯಾವುವೇ ನಿಯಮ ಅಥವಾ ಆದೇಶದ ಯಾವುದೇ ಉಪಬಂಧಗಳನ್ನು ಉಲ್ಲಂಘಿಸಿರುವ ಕಾರ್ಖಾನೆಯ ಪ್ರತಿಯೊಬ್ಬ ಎಣ್ಣೆ ತಾಳೆ ಉದ್ಯಮಿ/ಅಧಿಭೋಗದಾರನು, ಅಂಥ ಉಲ್ಲಂಘನೆಗಾಗಿ ದಂಡವನ್ನು ಉಪಬಂಧಿಸದಿದ್ದಲ್ಲಿ, ಅವನು ಒಂದು ಲಕ್ಷ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ದಂಡಿತನಾಗತಕ್ಕದ್ದು.

**19. ನೀಡಲಾದ ಸಹಾಯಧನ ಅಥವಾ ನೆರವನ್ನು ವಸೂಲಿ ಮಾಡುವ ಅಧಿಕಾರ.– (1)** ಯಾವುದೇ ಎಣ್ಣೆ ತಾಳೆ ನೆಡುತೋಪು (ಪ್ಲಾಂಟೇಷನ್) ಅಥವಾ ಅದರ ಭಾಗಕ್ಕೆ ಎಣ್ಣೆ ತಾಳೆ ಅಭಿವೃದ್ಧಿ ಯೋಜನೆಯ ಅಡಿಯಲ್ಲಿ ಸಹಾಯಧನವನ್ನು ಅಥವಾ ಯಾವುದೇ ಇತರ ನೆರವನ್ನು ನೀಡಲಾಗಿದೆಯೋ, ಆ ನೆಡುತೋಪು ಅಥವಾ ಅದರ ಭಾಗದಲ್ಲಿ ಎಣ್ಣೆ ತಾಳೆ ಬೆಳೆಗಾರನು ಸರ್ಕಾರ ಅಥವಾ ಕಾರ್ಖಾನೆಯ ಗಮನಕ್ಕೆ ತರುವ ಮೂಲಕ ಅಥವಾ ಗಮನಕ್ಕೆ ತರದೆ, ಉದ್ದೇಶಪೂರ್ವಕವಾಗಿ ಕಿತ್ತುಹಾಕಿದರೆ, ಈಗಾಗಲೇ ಸಹಾಯಧನ ಅಥವಾ ನೆರವಿನ ರೂಪದಲ್ಲಿ ಸಂದಾಯ ಮಾಡಿದ ಸಂಪೂರ್ಣ ಮೊಬಲಗನ್ನು ಯಾವ ದಿನಾಂಕದಿಂದ ಒಟ್ಟು ಮೊಬಲಗು ಬಾಕಿ ಉಳಿದಿದೆಯೋ ಆ ದಿನಾಂಕದಿಂದ ಬಡ್ಡಿಯ ಸಹಿತವಾಗಿ ಅಂಥ ಎಣ್ಣೆ ತಾಳೆ ಬೆಳೆಗಾರರಿಂದ ವಸೂಲಿ ಮಾಡುವ ಹಕ್ಕನ್ನು ಸರ್ಕಾರವು ಹೊಂದಿರತಕ್ಕದ್ದು. ಬಾಕಿಗಳನ್ನು ಭೂಕಂದಾಯದ ಬಾಕಿಯಾಗಿದಿದ್ದರೆ ಹೇಗೋ ಹಾಗೆ ರೈತರಿಂದ ವಸೂಲಿ ಮಾಡತಕ್ಕದ್ದು.

(2) ಯಾವೊಬ್ಬ ಎಣ್ಣೆ ತಾಳೆ ಉದ್ಯಮಿಯು, ಮುಂಗಡ ನಾಟಿ ಮಾಡುವ ಸಾಮಗ್ರಿ ಸಹಾಯಧನವನ್ನು ಸ್ವೀಕರಿಸಿದ ತರುವಾಯ, ನರ್ಸರಿಯಲ್ಲಿ ಎಣ್ಣೆ ತಾಳೆ ಎಳೆ ಸಸಿಗಳನ್ನು ಯಶಸ್ವಿಯಾಗಿ ಬೆಳೆಸದಿದ್ದರೆ, ಅಥವಾ ರಾಜ್ಯದ ಹೊರಗೆ ಎಣ್ಣೆ ತಾಳೆ ಸಸಿಗಳನ್ನು ವರ್ಗಾಯಿಸಿದರೆ ಅಥವಾ ಎಣ್ಣೆ ತಾಳೆ ಆಯುಕ್ತರ ಅನುಮೋದನೆ ಪಡೆಯದೆ ಮತ್ತೊಬ್ಬ ಎಣ್ಣೆ ತಾಳೆ ಉದ್ಯಮಿಗೆ ಎಣ್ಣೆ ತಾಳೆ ಎಳೆ ಸಸಿಗಳನ್ನು ಮಾರಾಟ ಮಾಡಿದರೆ, ನಾಟಿ ಸಾಮಗ್ರಿ ಸಹಾಯಧನವೆಂದು ಬಿಡುಗಡೆ ಮಾಡಿದ ಸಂಪೂರ್ಣ ಮೊಬಲಗನ್ನು, ಯಾವ ದಿನಾಂಕದಿಂದ ಒಟ್ಟು ಮೊಬಲಗು ಬಾಕಿ ಉಳಿದಿದೆಯೋ ಆ ದಿನಾಂಕದಿಂದ ಬಡ್ಡಿ ಸಹಿತವಾಗಿ ಅಂಥ ಎಣ್ಣೆ ತಾಳೆ ಉದ್ಯಮಿಯಿಂದ ವಸೂಲಿ ಮಾಡುವ ಹಕ್ಕನ್ನು ಸರ್ಕಾರವು ಹೊಂದಿರತಕ್ಕದ್ದು.

(3) ಯಾವೊಬ್ಬ ಎಣ್ಣೆ ತಾಳೆ ಉದ್ಯಮಿಯು, ಫಾರಂ–ಹೂಡಿಕೆ ಸಹಾಯಧನದ ಮೇಲೆ ಮುಂಗಡವನ್ನು ಸ್ವೀಕರಿಸಿದ ತರುವಾಯ, ಮಾರ್ಗಸೂಚಿಯ ಅಡಿಯಲ್ಲಿ ಅನುಮತಿಸದಿರುವ ಅಥವಾ ಯೋಜನೆ ನಿರ್ವಹಣಾ ಸಮಿತಿಯು ಅನುಮತಿಸದಿರುವ ಅನರ್ಹ ಬಾಬ್ತುಗಳಿಗೆ ಅಂಥ ಸಹಾಯಧನವನ್ನು ಉಪಯೋಗಿಸಿದರೆ, ಮೊಬಲಗು ಯಾವ ದಿನಾಂಕದಿಂದ ಬಾಕಿ ಉಳಿದಿದೆಯೋ ಆ ದಿನಾಂಕದಿಂದ ಅನರ್ಹ ಬಾಬ್ತುಗಳಿಗೆ ಬಳಸಿಕೊಂಡಂಥ ಮೊಬಲಗನ್ನು ಅದರ ಮೇಲಿನ ಬಡ್ಡಿಯೊಂದಿಗೆ ಎಣ್ಣೆ ತಾಳೆ ಉದ್ಯಮಿಯಿಂದ ವಸೂಲಿ ಮಾಡುವ ಹಕ್ಕನ್ನು ಸರ್ಕಾರವು ಕಾಯ್ದಿರಿಸತಕ್ಕದ್ದು.

**20. ಅಪರಾಧಗಳ ಬಗ್ಗೆ ರಾಜಿ ಮಾಡಿಕೊಳ್ಳುವುದು.–** ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಯಾವುದೇ ಅಪರಾಧದವನ್ನು ಎಸಗಿದ್ದ ಸಂದರ್ಭದಲ್ಲಿ, ಎಣ್ಣೆ ತಾಳೆ ಆಯುಕ್ತನು ಒಂದು ಕ್ಷಿಪ್ರ ವಿಚಾರಣೆಯನ್ನು ನಡೆಸಿ, ಆ ಅಪರಾಧಕ್ಕೆ ರಾಜಿ ರೂಪದಲ್ಲಿ, ಐವತ್ತು ಸಾವಿರ ರೂಪಾಯಿಗಳಿಗೆ ಮೀರದ ಮೊತ್ತದ ದಂಡವನ್ನು ವಿಧಿಸುವ ಆದೇಶವನ್ನು ಹೊರಡಿಸಬಹುದು. ಎಣ್ಣೆ ತಾಳೆ ಆಯುಕ್ತನು ದಂಡದ ಮೊತ್ತವನ್ನು ಸಂಗ್ರಹಿಸಲು ಅಧೀನ ಸಿಬ್ಬಂದಿಯನ್ನು ಅಧಿಕೃತಗೊಳಿಸಬಹುದು. ಹಾಗೆ ಸಂಗ್ರಹಿಸಲಾದ ದಂಡವನ್ನು ಎಣ್ಣೆ ತಾಳೆ ಯೋಜನೆಯಡಿಯಲ್ಲಿನ ಪಿಡಿ (PD) ಖಾತೆಯಲ್ಲಿ ಇಡತಕ್ಕದ್ದು.

**21. ಸದ್ಭಾವನೆಯಿಂದ ಕೈಗೊಂಡ ಕ್ರಮಕ್ಕೆ ರಕ್ಷಣೆ.–** ಈ ಅಧಿನಿಯಮದ, ಅಥವಾ ಅದರ ಅಡಿಯಲ್ಲಿ ರಚಿಸಿದ ಯಾವುದೇ ನಿಯಮದ ಅಥವಾ ಆದೇಶದ ಯಾವುವೇ ಉಪಬಂಧಗಳ ಅನುಸರಣೆಯಲ್ಲಿ ಸದ್ಭಾವನೆಯಿಂದ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಯಾವುದೇ ಕ್ರಮಕ್ಕಾಗಿ ಸರ್ಕಾರದ ಅಥವಾ ಯಾವೊಬ್ಬ ಅಧಿಕಾರಿಯ ಅಥವಾ ಸಿಬ್ಬಂದಿಯ ವಿರುದ್ಧ ಯಾವುದೇ ದಾವೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹರಣೆಗಳನ್ನು ಹೂಡಲು ಅವಕಾಶವಿರತಕ್ಕದ್ದಲ್ಲ.

**22. ಫರ್ಮು, ಕಂಪನಿ ಅಥವಾ ವ್ಯಕ್ತಿಗಳ ಸಂಘದಿಂದ ಅಪರಾಧಗಳು.–** (1) ಕಾರ್ಖಾನೆಯ ಎಣ್ಣೆ ತಾಳೆ ಉದ್ಯಮಿಯು/ಅಧಿಭೋಗದಾರರು ಒಂದು ಫರ್ಮು ಅಥವಾ ವ್ಯಕ್ತಿಗಳ ಒಂದು ಸಂಘವಾಗಿದ್ದಲ್ಲಿ, ಅದರ ಯಾವೊಬ್ಬ ಅಥವಾ ಹೆಚ್ಚಿನ ಪಾಲುದಾರರನ್ನು ಅಥವಾ ಅದರ ಸದಸ್ಯರನ್ನು, ಎಣ್ಣೆ ತಾಳೆ ಉದ್ಯಮಿ ಅಥವಾ ಕಾರ್ಖಾನೆಯ ಅಧಿಭೋಗದಾರನು, ಯಾವ ಅಪರಾಧಕ್ಕೆ ದಂಡನೀಯವಾಗಿರುವರೋ ಆ ಅಪರಾಧಕ್ಕೆ ಈ ಅಧಿನಿಯಮದ ಅಡಿಯಲ್ಲಿ ಪ್ರಾಸಿಕ್ಯೂಟ್ ಮಾಡಬಹುದು ಮತ್ತು ದಂಡಕ್ಕೆ ಗುರಿಪಡಿಸಬಹುದು:

ಪರಂತು, ಫರ್ಮು ಅಥವಾ ಸಂಘವು, ಈ ಅಧಿನಿಯಮದ ಉದ್ದೇಶಕ್ಕಾಗಿ, ಅವರಲ್ಲಿ ಒಬ್ಬರು ಪಾಲುಗಾರರನ್ನು ಅಥವಾ ಸದಸ್ಯರನ್ನು ಕಾರ್ಖಾನೆಯ ಅಧಿಭೋಗದಾರರಾಗಿ, ಅವರು ನಾಮನಿರ್ದೇಶನ ಮಾಡಿರುವುದನ್ನು ಲಿಖಿತದಲ್ಲಿ ಎಣ್ಣೆ ತಾಳೆ ಆಯುಕ್ತನಿಗೆ, ತಿಳಿಸಬಹುದು ಮತ್ತು ಆತನ ನಾಮನಿರ್ದೇಶನವನ್ನು ರದ್ದುಗೊಳಿಸಿರುವ ಹೆಚ್ಚಿನ ಮಾಹಿತಿಯನ್ನು ಎಣ್ಣೆ ತಾಳೆ ಆಯುಕ್ತನು ಸ್ವೀಕರಿಸುವವರೆಗೆ ಅಥವಾ ಸಂದರ್ಭಾನುಸಾರವಾಗಿ ಆತನು, ಫರ್ಮು ಅಥವಾ ಸಂಘದ ಪಾಲುದಾರನಾಗಿರುವುದು ಅಥವಾ ಸದಸ್ಯನಾಗಿರುವುದು ನಿಂತು ಹೋಗುವವರೆಗೆ ಅಂಥ ಪಾಲುಗಾರ ಅಥವಾ ಸದಸ್ಯನನ್ನು ಈ ಅಧಿನಿಯಮದ ಉದ್ದೇಶಕ್ಕಾಗಿ ಎಣ್ಣೆ ತಾಳೆ ಉದ್ಯಮಿ ಅಥವಾ ಕಾರ್ಖಾನೆಯ ಅಧಿಭೋಗದಾರ ಎಂದು ಭಾವಿಸತಕ್ಕದ್ದು.

(2) ಎಣ್ಣೆ ತಾಳೆ ಉದ್ಯಮಿ ಅಥವಾ ಕಾರ್ಖಾನೆಯ ಅಧಿಭೋಗದಾರನು ಒಂದು ಕಂಪನಿ ಅಥವಾ ಸಹಕಾರ ಸಂಘವಾಗಿದ್ದಲ್ಲಿ, ಅದರ ಯಾವೊಬ್ಬ ಅಥವಾ ಹೆಚ್ಚಿನ ನಿರ್ದೇಶಕರನ್ನು ಅಥವಾ ಸಂದರ್ಭಾನುಸಾರವಾಗಿ ಸಮಿತಿಯ ಸದಸ್ಯರನ್ನು, ಎಣ್ಣೆತಾಳೆ ಉದ್ಯಮಿ ಅಥವಾ ಕಾರ್ಖಾನೆಯ ಅಧಿಭೋಗದಾರನು ಯಾವ ಅಪರಾಧಕ್ಕೆ ದಂಡನೀಯವಾಗಿರುವನೋ ಆ ಅಪರಾಧಕ್ಕೆ, ಈ ಅಧಿನಿಯಮದಡಿಯಲ್ಲಿ ಪ್ರಾಸಿಕ್ಯೂಟ್ ಮಾಡಬಹುದು ಮತ್ತು ದಂಡಕ್ಕೆ ಗುರಿಪಡಿಸಬಹುದು:

ಪರಂತು, ಕಂಪನಿ ಅಥವಾ ಸಹಕಾರ ಸಂಘವು, ಈ ಅಧಿನಿಯಮದ ಉದ್ದೇಶಕ್ಕಾಗಿ ಅಂಥ ಕಂಪನಿಯ ನಿರ್ದೇಶಕ ಅಥವಾ ಷೇರುದಾರ ಅಥವಾ ಅಂಥ ಸಹಕಾರ ಸಂಘದ ಅಥವಾ ಅದರ ಸಮಿತಿಯ ಸದಸ್ಯನನ್ನು ಎಣ್ಣೆ ತಾಳೆ ಉದ್ಯಮಿ ಅಥವಾ ಕಾರ್ಖಾನೆಯ ಅಧಿಭೋಗದಾರನೆಂದು ನಾಮನಿರ್ದೇಶನ ಮಾಡಿರುವುದಾಗಿ ಲಿಖಿತದಲ್ಲಿ, ಎಣ್ಣೆ ತಾಳೆ ಆಯುಕ್ತರಿಗೆ ತಿಳಿಸಬಹುದು ಮತ್ತು ಆತನ ನಾಮನಿರ್ದೇಶನವನ್ನು ರದ್ದುಗೊಳಿಸಿರುವ ಹೆಚ್ಚಿನ ಮಾಹಿತಿಯನ್ನು ಎಣ್ಣೆ ತಾಳೆ ಆಯುಕ್ತನು ಸ್ವೀಕರಿಸುವವರೆಗೆ ಅಥವಾ ನಿರ್ದೇಶಕ ಅಥವಾ ಷೇರುದಾರ ಅಥವಾ ಸಂದರ್ಭಾನುಸಾರವಾಗಿ ಸದಸ್ಯನಾಗಿರುವುದು ನಿಂತು ಹೋಗುವವರೆಗೆ ಅಂಥ ನಿರ್ದೇಶಕ, ಷೇರುದಾರ ಅಥವಾ ಸದಸ್ಯನನ್ನು, ಈ ಅಧಿನಿಯಮದ ಉದ್ದೇಶಗಳಿಗಾಗಿ ಎಣ್ಣೆ ತಾಳೆ ಉದ್ಯಮಿ ಅಥವಾ ಕಾರ್ಖಾನೆಯ ಅಧಿಭೋಗದಾರನೆಂದು ಭಾವಿಸತಕ್ಕದ್ದು.

**23. ನಿರ್ದೇಶನಗಳನ್ನು ನೀಡಲು ಸರ್ಕಾರದ ಅಧಿಕಾರ.–** ಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಅವಶ್ಯ ಅಥವಾ ಯುಕ್ತವೆಂದು ತಾನು ಅಭಿಪ್ರಾಯಪಡುವ ಅಂಥ ನಿರ್ದೇಶನಗಳನ್ನು, ಯೋಜನೆ ನಿರ್ವಹಣಾ ಸಮಿತಿಗೆ, ಬೆಲೆ ನಿರ್ಧರಣಾ ಸಮಿತಿಗೆ ಅಥವಾ ಎಣ್ಣೆ ತಾಳೆ ಆಯುಕ್ತರಿಗೆ ನೀಡಬಹುದು ಮತ್ತು ಅಂಥ ನಿರ್ದೇಶನಗಳ ಪಾಲನೆ ಮಾಡುವುದು ಯೋಜನೆ ನಿರ್ವಹಣಾ ಸಮಿತಿಯ, ಬೆಲೆ ನಿರ್ಧರಣಾ ಸಮಿತಿಯ ಅಥವಾ ಎಣ್ಣೆ ತಾಳೆ ಆಯುಕ್ತರ ಕರ್ತವ್ಯವಾಗಿರತಕ್ಕದ್ದು.

**24. ಅಧಿಕಾರಗಳ ಪ್ರತ್ಯಾಯೋಜನೆ.–** ಸರ್ಕಾರವು, ಅಧಿಸೂಚನೆಯ ಮೂಲಕ, 25ನೇ ಪ್ರಕರಣದ ಅಡಿಯಲ್ಲಿನ ನಿಯಮ ರಚನಾಧಿಕಾರವನ್ನು ಹೊರತುಪಡಿಸಿ, ಈ ಅಧಿನಿಯಮದ ಅಡಿಯಲ್ಲಿಯ ತನ್ನ ಎಲ್ಲಾ ಅಥವಾ ಯಾವುದೇ ಅಧಿಕಾರವನ್ನು, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು, ತನ್ನ ಅಧೀನದಲ್ಲಿರುವ ಯಾವೊಬ್ಬ ವ್ಯಕ್ತಿಗೆ ಅಥವಾ ಪ್ರಾಧಿಕಾರಕ್ಕೆ, ಪ್ರತ್ಯಾಯೋಜಿಸಬಹುದು.

**25. ನಿಯಮಗಳ ರಚನಾಧಿಕಾರ.–** (1) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಮತ್ತು ಪೂರ್ವ ಪ್ರಕಟಣೆಯ ತರುವಾಯ ಈ ಅಧಿನಿಯಮದ ಎಲ್ಲಾ ಅಥವಾ ಯಾವುದೇ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನ ಅಥವಾ ನಿರಂತರ ಅಧಿವೇಶನಗಳ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮೊದಲು ಉಭಯ ಸದನಗಳು ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಲು ಒಪ್ಪಿದರೆ ಅಥವಾ ಆ ನಿಯಮವನ್ನು ರಚಿಸತಕ್ಕದ್ದಲ್ಲವೆಂದು ಉಭಯ ಸದನಗಳು ಒಪ್ಪಿದರೆ ತದನಂತರ ಅಂಥ ನಿಯಮವು ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಈ ಮೊದಲು ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧಕವನ್ನು ಉಂಟುಮಾಡತಕ್ಕದ್ದಲ್ಲ.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಖಾದ್ಯ ತೈಲಗಳಿಗಾಗಿ ಹೆಚ್ಚುತ್ತಿರುವ ಬೇಡಿಕೆಯನ್ನು ಈಡೇರಿಸುವುದಕ್ಕಾಗಿ, ತನ್ನ ಹೆಚ್ಚಿನ ಎಣ್ಣೆ ಉತ್ಪತ್ತಿಯ ಸಾಮರ್ಥ್ಯದ ದೃಷ್ಟಿಯಿಂದ ಎಣ್ಣೆ ತಾಳೆಯು ರಾಷ್ಟ್ರದಲ್ಲಿ ಸಾಗುವಳಿಗಾಗಿ ಸೂಕ್ತ ಬೆಳೆಯೆಂದು ಗುರುತಿಸಲಾಗಿದೆ. ಭಾರತ ಸರ್ಕಾರದ ನೆರವಿನೊಂದಿಗೆ ಎಣ್ಣೆ ತಾಳೆ ಯೋಜನೆಯನ್ನು ಕೈಗೊಂಡ ರಾಜ್ಯಗಳಲ್ಲಿ ಕರ್ನಾಟಕವೂ ಒಂದಾಗಿದೆ. ತೈಲವನ್ನು ತೆಗೆಯುವುದಕ್ಕೆ, ಎಣ್ಣೆ ತಾಳೆಯ ತಾಜಾ ಹಣ್ಣುಗಳ ಗೊಂಚಲನ್ನು ಕಿತ್ತು ಇಪ್ಪತ್ನಾಲ್ಕು ಗಂಟೆಗಳೊಳಗೆ ಸಂಸ್ಕರಿಸಬೇಕಾಗುವುದರಿಂದ, ಬೆಳೆಗಾರರ ಮತ್ತು ಸಂಸ್ಕರಣಕಾರರ ನಡುವೆ ನಿಕಟ ಸಮನ್ವಯವಿರುವುದು ಅವಶ್ಯಕವಾಗಿದೆ. ಆದ್ದರಿಂದ, ಎಣ್ಣೆ ತಾಳೆಯ ಸಾಗುವಳಿ, ಉತ್ಪಾದನೆ ಮತ್ತು ಸಂಸ್ಕರಣದ ನಿಯಂತ್ರಣಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳಿಗಾಗಿ ಶಾಸನ ಇರುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಈ ವಿಧೇಯಕವು, ಇತರ ವಿಷಯಗಳೊಂದಿಗೆ,

(i) ಬೆಳೆಗಾರನಿಗೆ ಆತನ ಉತ್ಪನ್ನದ ಮಾರಾಟ ಮತ್ತು ಅಂಥ ಉತ್ಪನ್ನದ ಮಾರಾಟಕ್ಕಾಗಿ ಹಣ ಸಂದಾಯದ ಬಗ್ಗೆ ಭರವಸೆಯನ್ನು ನೀಡುವುದಕ್ಕಾಗಿ;

(ii) ರಾಜ್ಯದಲ್ಲಿ ಎಣ್ಣೆ ತಾಳೆ ಅಭಿವೃದ್ಧಿಯ ಕಾರ್ಯಕ್ರಮದ ಅನುಷ್ಠಾನದ ಮೂಲಕ ಎಣ್ಣೆ ತಾಳೆ ಸಾಗುವಳಿಯ ಅಭಿವೃದ್ಧಿಯ ಕುರಿತು ಕ್ರಮಗಳನ್ನು ತೆಗೆದುಕೊಳ್ಳಲು ಯೋಜನೆ ನಿರ್ವಹಣಾ ಸಮಿತಿಯನ್ನು ರಚಿಸುವುದಕ್ಕಾಗಿ;

(iii) ಬೆಳೆಗಾರನಿಗೆ ಎಣ್ಣೆ ತಾಳೆ ತಾಜಾ ಹಣ್ಣಿನ ಗೊಂಚಲಿಗಾಗಿ ಸೂಕ್ತ ಬೆಲೆ ದೊರೆಯುವುದನ್ನು ಖಚಿತಪಡಿಸಲು ಒಂದು ಬೆಲೆ ನಿರ್ಧರಣ ಸಮಿತಿಯನ್ನು ರಚಿಸುವುದಕ್ಕಾಗಿ;

(iv) ಎಣ್ಣೆ ತಾಳೆ ಬೆಳೆಗಾರರಿಗೆ ಮತ್ತು ಎಣ್ಣೆ ತಾಳೆ ಸಂಸ್ಕರಣದಲ್ಲಿ ನಿರತವಾಗಿರುವ ಕೈಗಾರಿಕೆಗಳ ಕಾರ್ಯ ಚಟುವಟಿಕೆಗಳನ್ನು ಸಮನ್ವಯಗೊಳಿಸುವುದಕ್ಕಾಗಿ ಮತ್ತು ಈ ಅಧಿನಿಯಮದ ಮೂಲಕ ಸೂಚಿಸಲಾದ ಅಂಥ ಅಧಿಕಾರಗಳನ್ನು ಚಲಾಯಿಸುವುದಕ್ಕಾಗಿ ಎಣ್ಣೆ ತಾಳೆ ಆಯುಕ್ತರ ನೇಮಕಾತಿಗಾಗಿ;

(v) ವಲಯದಲ್ಲಿ ಇರುವ ಕಾರ್ಖಾನೆಗೆ ತಾಜಾ ಎಣ್ಣೆ ತಾಳೆ ಹಣ್ಣಿನ ಗೊಂಚಲುಗಳ ನಿಯಮಿತ ಸರಬರಾಜನ್ನು ಖಚಿತಪಡಿಸುವ ಉದ್ದೇಶಕ್ಕಾಗಿ ಕಾರ್ಖಾನೆ ವಲಯದ ಘೋಷಣೆ ಮಾಡುವುದಕ್ಕಾಗಿ;

(vi) ಎಣ್ಣೆ ತಾಳೆ ಬೆಳೆಗಾರರ ನೋಂದಣಿಗಾಗಿ;

(vii) ಉದ್ಯಮಿ ಅಥವಾ ಕಾರ್ಖಾನೆಯ ಅಧಿಭೋಗದಾರನು ಎಣ್ಣೆ ತಾಳೆಯ ತಾಜಾ ಹಣ್ಣಿನ ಗೊಂಚಲುಗಳನ್ನು ಖರೀದಿ ಮಾಡಲು ವಿಫಲನಾದ ಸಂದರ್ಭದಲ್ಲಿ ಉದ್ಯಮಿಯಿಂದ ಎಣ್ಣೆ ತಾಳೆ ಬೆಳೆಗಾರರಿಗೆ ನಷ್ಟ ಪರಿಹಾರದ ಸಂದಾಯವನ್ನು ಮಾಡುವುದಕ್ಕಾಗಿ;

(viii) ರಾಜ್ಯದಲ್ಲಿ ಎಣ್ಣೆ ತಾಳೆ ಕಾರ್ಯಕ್ರಮದ ಯುಕ್ತ ಅನುಷ್ಠಾನಕ್ಕಾಗಿ,

– ಉಪಬಂಧಗಳನ್ನು ಕಲ್ಪಿಸುತ್ತದೆ.

ವಿಧೇಯಕವು ಕೆಲವು ಇತರ ಆನುಷಂಗಿಕ ವಿಷಯಗಳಿಗೂ ಉಪಬಂಧ ಕಲ್ಪಿಸುತ್ತದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ**

| | |
|---|---|
| **ಖಂಡ 4 :** | 4ನೇ ಖಂಡದ (ಇ) ಬಾಬು, ಯೋಜನೆ ನಿರ್ವಹಣಾ ಸಮಿತಿಯ ಅಂಥ ಇತರ ಪ್ರಕಾರ್ಯಗಳ ಕುರಿತ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 5:** | 5ನೇ ಖಂಡದ (4)ನೇ ಉಪಖಂಡವು, ಬೆಲೆ ನಿರ್ಧರಣಾ ಸಮಿತಿಯ ಸರ್ಕಾರೇತರ ಸದಸ್ಯರಿಗೆ ಸಂದಾಯ ಮಾಡಬೇಕಾದ ಭತ್ಯೆಗಳ ಕುರಿತು ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 6:** | 6ನೇ ಖಂಡದ (3)ನೇ ಉಪಖಂಡವು, ಬೆಲೆ ನಿರ್ಧರಣಾ ಸಮಿತಿಯ ಅಂಥ ಇತರ ಪ್ರಕಾರ್ಯಗಳ ಕುರಿತು ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 8:** | 8ನೇ ಖಂಡದ (1)ನೇ ಉಪಖಂಡದ (iv) ನೇ ಬಾಬು, ಎಣ್ಣೆ ತಾಳೆ ಆಯುಕ್ತನ ಇತರ ಅಧಿಕಾರಗಳ ಕುರಿತು ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 9:** | 9ನೇ ಖಂಡದ (iii) ನೇ ಉಪಖಂಡವು, ಎಣ್ಣೆ ತಾಳೆ ಪರಿಶೀಲಕನ ಇತರ ಅಧಿಕಾರಗಳ ಕುರಿತು ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 10:** | 10ನೇ ಖಂಡದ (3)ನೇ ಉಪಖಂಡವು, ಯೋಜನೆ ನಿರ್ವಹಣಾ ಸಮಿತಿಯ ಸಭೆಗಳ ಕೋರಂ ಮತ್ತು ಸಭೆಯ ಕಾರ್ಯವಿಧಾನಗಳ ಕುರಿತು ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 11:** | 11ನೇ ಖಂಡದ (1)ನೇ ಉಪಖಂಡವು, ಕಾರ್ಖಾನೆಗೆ ಹೊಂದಿಕೊಂಡಿರುವ ವಲಯದಲ್ಲಿ ನಿರ್ವಹಿಸಬೇಕಾದ ಎಣ್ಣೆ ತಾಳೆ ಬೆಳೆಗಾರರ ರಿಜಿಸ್ಟರ್‌ನ ನಮೂನೆ ಮತ್ತು ವಿಧಾನದ ಕುರಿತು ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 17:** | 17ನೇ ಖಂಡವು, ಯೋಜನೆ ನಿರ್ವಹಣಾ ಸಮಿತಿಯು ಮತ್ತು ಬೆಲೆ ನಿರ್ಧರಣಾ ಸಮಿತಿಯು ವರದಿಯನ್ನು ಸಲ್ಲಿಸುವ ದಿನಾಂಕ, ನಮೂನೆ ಮತ್ತು ಅವಧಿಯ ಕುರಿತು ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 25:** | 25ನೇ ಖಂಡದ (1)ನೇ ಉಪಖಂಡವು, ಈ ಅಧಿನಿಯಮ ಎಲ್ಲಾ ಅಥವಾ ಯಾವುದೇ ಉದ್ದೇಶಗಳನ್ನು ಈಡೇರಿಸುವ ಕುರಿತು ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಶಾಮನೂರು ಶಿವಶಂಕರಪ್ಪ**
ಕೃಷಿ ಮಾರುಕಟ್ಟೆ ಮತ್ತು ತೋಟಗಾರಿಕೆ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## KARNATAKA LEGISLATIVE ASSEMBLY
### FOURTEENTH LEGISLATIVE ASSEMBLY
### FIRST SESSION ADJOURNED MEETING
## THE KARNATAKA OIL PALM (REGULATION OF CULTIVATION, PRODUCTION AND PROCESSING) BILL, 2013
### (L.A. BILL No. 5 of 2013)

A Bill to provide for the regulation of cultivation, production and processing of oil palm and for matters connected therewith.

Whereas it is expedient to provide for the regulation of cultivation, production and processing of oil palm and for matters connected therewith;

Be it enacted by the Karnataka State Legislature in the Sixty fourth year of the Republic of India as follows: -

**1. Short title and commencement.-** (1) This Act may be called the Karnataka Oil Palm (Regulation of Cultivation, Production and Processing) Act, 2013.

(2) It shall come into force on such date as the State Government may, by notification, appoint.

**2. Definitions.-** In this Act, unless the context otherwise requires,-

(a) "Factory" means and includes any premises as defined in the Factories Act, 1948 (Central Act 63 of 1948) with the precincts thereof, in any part of which a manufacturing process connected with processing of oil palm fruits and products;

(b) "Factory Zone" means an area declared as a factory zone under section 12;

(c) "Government" means the State Government;

(d) "Occupier of the Factory" means any person who has the ultimate control over the affairs of the factory and is entitled to be treated as an Occupier and such person need not necessarily be a Director of the Board of the Management of the factory;

(e) "Oil Palm Entrepreneur" means an entrepreneur whom the Government has recognized for oil palm development in a particular zone and who fulfils all the conditions prescribed by the Government in the allotment order and issued from time to time;

(f) "Oil Palm" means the Palm of the genus Elaeis and includes the Species Elaeis guinensis and Elaeis oleifera,, malanococoa or corozo and hybrids of these species;

(g) "Oil Palm Commissioner" means the Oil Palm Commissioner appointed under sub-section (1) of section 7;

(h) "Oil Palm FFB" means the unprocessed Oil Palm Fresh Fruit Bunch and includes its loose fruit also;

(i) "Oil Palm Grower" means a person who cultivates Oil Palm whether by himself or by his own servants or by hired labour or by members of his family or by his tenants;

(j) "Oil Palm Inspector" means the Oil Palm Inspector appointed under sub-section(2) of section 7;

(k) "Oil Palm Product" means any product obtained directly from Oil Palm fruit, includes processed products like Palm Oil, Palmolein, Palm Stearin, Palm Kernel, Palm Kernel Oil, Palm Kernel cake, Palm Fatty Acids oil, Palm seeds and any other by-products notified by the Government from time to time;

(l) Price Fixation Committee means Price Fixation Committee constituted under section 5;

(m) Project Management Committee means Project Management Committee constituted under Section 3;

**3. Constitution of Project Management Committee.-** (1) As soon as may be after the commencement of this Act, the Government shall, by notification constitute a Project Management Committee consisting of the following, namely: -

| | | |
|---|---|---|
| (i) | The Principal Secretary/Secretary to Government, (Horticulture) as the case may be | - Chairman |
| (ii) | The Secretary to Government (Expenditure) Finance Department or his nominee | - Member |
| (iii) | The Director, Project Formulation Division, Planning Department | - Member |
| (iv) | The Director of Horticulture | - Member |
| (v) | The Director, Directorate of Oil Palm Research, Pedavegi, Andhra Pradesh or his nominee | - Member |
| (vi) | A representative of the Government of India, Ministry of Agriculture and Co-operation, Technology Mission on Oil Seeds, oil palm and maize | - Member |
| (vii) | The Oil Palm Commissioner | - Member Secretary |

(2) No act or proceeding of the Project Management Committee shall be invalid by reason only of the existence of any vacancy or defect in the constitution of the committee, if such act or proceeding is otherwise in accordance with the provisions of this Act.

**4 Functions of the Project Management Committee.-** The Project Management Committee (PMC) shall perform the following functions, namely,-

(a) to advise or recommend or approve areas for development of oil palm cultivation, also identify or select suitable entrepreneurs for such areas from time to time and allot areas to the identified entrepreneurs. Such entrepreneurs shall enter into a Memorandum of Agreement (MOA) with the Government.

(b) to review and monitor the progress of implementation of the programme of Oil Palm development in the State by the Project staff and take appropriate decisions for the development of oil palm in each of the zones;

(c) to review the functioning of each of the entrepreneurs, from time to time, with respect to the objectives envisaged or targets assigned and take appropriate decisions in the interest of efficient functioning of the project as envisaged in Memorandum of Agreement ;

(d) to accord all financial and administrative sanctions for the implementation of the project; and

(e) to perform such other functions as may be prescribed.

**5. Constitution of Price Fixation Committee.-** (1) As soon as may be after the commencement of this Act, the Government shall, by notification, constitute a Price Fixation Committee consisting of the following, namely:-

| | | |
|---|---|---|
| (i) | The Principal Secretary/Secretary to Government, (Horticulture) as the case may be | - Chairman |
| (ii) | The Director of Horticulture, Bangalore | - Member |
| (ii) | One Representative nominated by the Government from each of the Entrepreneurs. | - Member |
| (iv) | Deputy Secretary, nominated by Finance Department | - Member |
| (v) | One farmer representative nominated by the Government, from each of the factory zones. | - Member |
| (vi) | Oil Palm Commission | - Member Secretary |

(2) Subject to the pleasure of the Government a non-official member shall hold office for a period of three years, from the date of nomination. A member nominated once to the Price Fixation Committee, is not eligible for renomination, for the second time.

(3) A non-official member may resign his office by writing under his hand addressed to the Government, but he shall continue in office until his resignation is accepted.

(4) The non–official members of the Price Fixation Committee shall receive such allowances as may be prescribed.

(5) The Government may remove a non-official member from his office if he,-

(a) becomes an undischarged insolvent; or

(b) is convicted and sentenced to imprisonment for an offence which in the opinion of the Government involves moral turpitude, or

(c) becomes of unsound mind, stands so declared by a competent court, or

(d) refuses to act or becomes incapable of acting, or

(e) has been removed or dismissed from service of the Central Government or the State Government or a Local Authority or a Body or Corporation owned or controlled by the Central Government or the State Government, or

(f) in the opinion of the Government has so abused the position of the member as to render that person's continuance in office detrimental to the public interest:

Provided that no person shall be removed under this clause unless he has been given a reasonable opportunity of being heard in the matter.

(6) The vacancy caused under sub-section (5) or otherwise shall be filled by fresh nomination.

(7) No act or proceedings of the Price Fixation Committee shall be invalid by reason only of the existence of any vacancy or defect in the constitution of the Price Fixation Committee, if such act or proceeding is otherwise in accordance with the provisions of this Act.

(8) Power to propose MSP for Fresh Fruit bunch based on the technical committee report to the Government from time to time.

**6. Functions of the Price Fixation Committee**.-(1) The Price Fixation Committee (PFC) shall perform the following functions, namely,-

(1) to recommend or approve the price for purchase of oil palm Fresh Fruit Bunches. having regard to,

(a) the prices at which Crude palm oil produced from Oil Palm Fresh Fruit Bunch is sold by a factory;

(b) the recovery of oil from Fresh Fruit Bunch;

(c) the prices of crude palm oil in international market, and in other states in the country;

(2) to convene a meeting once in four months to fix the price of Fresh Fruit Bunch and to discuss related issues.

(3) to perform such other functions as may be prescribed.

(4) No person shall sell or agree to sell oil palm Fresh Fruit Bunch to the Entrepreneur/ Occupier of a factory and no such Entrepreneur/ Occupier shall purchase or agree to purchase Fresh Fruit Bunch, at a price lower/higher than the price specified under sub-section (1).

**7. Appointment of Oil Palm Commissioner and Oil Palm Inspectors.-** (1) The Government shall appoint an officer of the Department of Horticulture not below the rank of Additional Director of Horticulture as the Oil Palm Commissioner to exercise the powers and perform the functions of the oil palm commissioner under this Act.

(2) The Senior Assistant Director of Horticulture or Assistant Directors of Horticulture or Assistant Horticulture Officers , as the case may be, be appointed by the Government to be the oil palm inspectors within the areas of their respective jurisdictions to exercise the powers and perform the functions of the oil palm inspectors under this Act.

**8. Power of the Oil Palm Commissioner .-** (1) The Oil Palm Commissioner shall exercise the following powers, namely:-

(i) to co-ordinate the activities of the oil palm growers and industries/ entrepreneurs engaged in the production and processing of Palm Oil;

(ii) to act as a nodal officer/ monitoring officer for development of Oil Palm in the State;

(iii) to monitor the progress achieved by each of the entrepreneurs in the development of oil palm and make suitable recommendations to Project Management Committee for decisions.

(iv) to exercise such other powers as may be prescribed.

**9.Power of the Oil Palm Inspector.-** The Oil Palm Inspector shall exercise the following powers, namely, -

(i) to assist the Oil Palm Commissioner in the exercise of his powers and discharge of his duties;

(ii) to exercise such powers as are delegated to him by the Project Management Committee and Oil Palm Commissioner; and

(iii) to exercise such other powers as may be prescribed.

**10. Meetings of the Project Management Committee and the Price Fixation Committee.-** (1) The meetings of the Project Management Committee or the Price Fixation Committee may be convened by the Chairman of the respective Committee.

(2) The Chairman of the Project Management Committee or the Price Fixation Committee may if he/she feels it necessary convene a special meeting .

(3) The quorum at the meeting and the procedure of the meeting of the Project Management Committee or the Price Fixation Committee shall be such as may be prescribed.

(4) Every meeting of the Project Management Committee or Price Fixation Committee shall be presided over by its Chairman and if for any reason the Chairman is unable to attend the meeting, any other member nominated by the Chairman or any other member chosen by the members present at the meeting shall preside over the meeting.

**11. Registration of Oil Palm Growers.-** (1) Every Entrepreneur/ Occupier of a factory in a factory zone shall maintain in such form and in such manner as may be prescribed a Register of Oil Palm Growers in the zone attached to the factory. The register shall be updated every year and shall always be available in the office of the factory for inspection by the Oil Palm Commissioner or Oil Palm Inspectors.

(2) The Oil Palm Inspector may at any time inspect an Entrepreneur's office/factory and verify such records, reports, statements and registers as may be required to be maintained and may also direct the Entrepreneur/Occupier of the factory to produce them for his verification.

**12. Declaration of factory zone.-** (1) The Project Management Committee may notify any area as factory zone for the purpose of supply of Fresh fruit bunches, to the factory specified for the purpose or for purchase of oil palm Fresh fruit bunches and any other oil palm product by the factory.

(2) Where any particular area is notified as factory zone under sub section (1), the Oil Palm Growers in that area shall supply oil palm Fresh fruit bunches from the oil palm plantations grown in that area only to the factory to which the factory zone is attached.

| ಕ್ರ. ಸಂ. | ಅಧಿಕಾರಿಗಳ ವಿವರ ಮತ್ತು ಪದನಾಮ | ಕಾರ್ಯವ್ಯಾಪ್ತಿ |
|---|---|---|
| 35. | ಕಾರ್ಮಿಕ ಅಧಿಕಾರಿ, ಚಿಕ್ಕಮಗಳೂರು ಉಪ ವಿಭಾಗ–1, ಚಿಕ್ಕಮಗಳೂರು. | ಚಿಕ್ಕಮಗಳೂರು ನಗರದ ಮುನ್ಸಿಪಲ್ ಡಿವಿಜನ್ ಸಂಖ್ಯೆ: 1 ರಿಂದ 3 ಮತ್ತು ಚಿಕ್ಕಮಗಳೂರು ತಾಲ್ಲೂಕಿನ ವಸ್ತಾರೆ, ಆಲ್ದೂರು, ಕಾಂಡ್ಯ ಮತ್ತು ಅಂಬಳೆ ಹೋಬಳಿಗಳು ಹಾಗೂ ಕೊಪ್ಪ, ಶೃಂಗೇರಿ, ನರಸಿಂಹರಾಜಪುರ ಮತ್ತು ತರೀಕೆರೆ ತಾಲ್ಲೂಕುಗಳು. |
| 36. | ಕಾರ್ಮಿಕ ಅಧಿಕಾರಿ, ಚಿಕ್ಕಮಗಳೂರು ಉಪ ವಿಭಾಗ–2 ಚಿಕ್ಕಮಗಳೂರು. | ಚಿಕ್ಕಮಗಳೂರು ನಗರದ ಮುನ್ಸಿಪಲ್ ಡಿವಿಜನ್ ಸಂಖ್ಯೆ: 4 ರಿಂದ 7 ಮತ್ತು ಚಿಕ್ಕಮಗಳೂರು ತಾಲ್ಲೂಕಿನ ಕಸಬಾ, ಲಕ್ಯ, ಆವತಿ ಮತ್ತು ಜಾಗರ ಹೋಬಳಿಗಳು ಹಾಗೂ ಮೂಡಿಗೆರೆ ಮತ್ತು ಕಡೂರು ತಾಲ್ಲೂಕುಗಳು. |
| 37. | ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪ ವಿಭಾಗ–1, ಮಂಗಳೂರು. | ಮಂಗಳೂರು ನಗರ ಪಾಲಿಕೆಯ ವಾರ್ಡ್ ಸಂಖ್ಯೆ: 14 ರಿಂದ 17, 22 ರಿಂದ 25 ಹಾಗೂ ಮಂಗಳೂರು ತಾಲ್ಲೂಕಿನ ಎಲ್ಲಾ ಪ್ರದೇಶಗಳು ಮತ್ತು ಬೆಳ್ತಂಗಡಿ ತಾಲ್ಲೂಕು. |
| 38. | ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪ ವಿಭಾಗ–2, ಮಂಗಳೂರು. | ಮಂಗಳೂರು ನಗರ ಪಾಲಿಕೆಯ ವಾರ್ಡ್ ಸಂಖ್ಯೆ: 1 ರಿಂದ 13 ಮತ್ತು 18 ರಿಂದ 21, ಬಂಟ್ವಾಳ, ಪುತ್ತೂರು ಮತ್ತು ಸುಳ್ಯ ತಾಲ್ಲೂಕುಗಳು. |
| 39. | ಕಾರ್ಮಿಕ ಅಧಿಕಾರಿ, ರಾಮನಗರ. | ರಾಮನಗರ ಜಿಲ್ಲೆ. . |
| 40. | ಕಾರ್ಮಿಕ ಅಧಿಕಾರಿ, ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ ಜಿಲ್ಲೆ.. |
| 41. | ಕಾರ್ಮಿಕ ಅಧಿಕಾರಿ, ಯಾದಗಿರಿ. | ಯಾದಗಿರಿ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಕಾಇ 154 ಎಲ್ಇಟಿ 2013(4), ಬೆಂಗಳೂರು, ದಿನಾಂಕ: 06.08.2013

ಕಾರ್ಮಿಕ ಇಲಾಖೆ ಅನುಷ್ಠಾನಗೊಳಿಸುತ್ತಿರುವ ಹೆರಿಗೆ ಸೌಲಭ್ಯ ಕಾಯ್ದೆ, 1961ರ [The Maternity Benefit Act 1961] - (ಕೇಂದ್ರ ಕಾಯಿದೆ 53–1961); ಕಲಂ – 17(3) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೋಷ್ಟಕದ 2ನೇ ಅಂಕಣದಲ್ಲಿ ನಮೂದಿಸಿರುವ ಕ್ರ.ಸಂ. 1 ರಿಂದ 5ರವರೆಗಿನ ಅಧಿಕಾರಿಗಳಿಗೆ ಕಾರ್ಯವ್ಯಾಪ್ತಿ ನಿಗಧಿಪಡಿಸಿ ಸಕ್ಷಮ/ನಿಗಧಿತ ಪ್ರಾಧಿಕಾರಿಗಳನ್ನಾಗಿ (Competent/Prescribed Authority) ನೇಮಕ ಮಾಡಿದೆ.

**ಕೋಷ್ಟಕ**

| ಕ್ರ. ಸಂ. | ಅಧಿಕಾರಿಗಳ ವಿವರ ಮತ್ತು ಪದನಾಮ | ಕಾರ್ಯವ್ಯಾಪ್ತಿ |
|---|---|---|
| 1 | ಉಪ ಕಾರ್ಮಿಕ ಆಯುಕ್ತರು, ಪ್ರಾದೇಶಿಕ–1, ಬೆಂಗಳೂರು. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ ಸಂಖ್ಯೆ 3, 4, 8 ರಿಂದ 20, 34 ರಿಂದ 46, 61 ರಿಂದ 77, 93 ರಿಂದ 108, 109 ರಲ್ಲಿ ಹಿರಿಯ ಕಾರ್ಮಿಕ ನಿರೀಕ್ಷಕರು 9ನೇ ವೃತ್ತಕ್ಕೆ ನಿಗದಿಪಡಿಸಿದ ಕಾರ್ಯವ್ಯಾಪ್ತಿಯನ್ನು ಹೊರತುಪಡಿಸಿ ಉಳಿದ ಪ್ರದೇಶಗಳು, 120 ರಿಂದ 137, 141, 155 ರಿಂದ 170, 177 ರಿಂದ 187, 194 ರಿಂದ 198, ಬೆಂಗಳೂರು ಉತ್ತರ ತಾಲ್ಲೂಕಿನ ದಾಸನಪುರ ಹೋಬಳಿ, ಯಶವಂತಪುರ ಹೋಬಳಿ, ತಾವರೆಕೆರೆ ಹೋಬಳಿ, ಯಲಹಂಕ ಹೋಬಳಿ, ಹೆಸರಘಟ್ಟ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕಿನ ಉತ್ತರಹಳ್ಳಿ, ಕೆಂಗೇರಿ, ನೆಲಮಂಗಲ ತಾಲ್ಲೂಕು, ದೊಡ್ಡಬಳ್ಳಾಪುರ ತಾಲ್ಲೂಕು ಹಾಗೂ ತುಮಕೂರು, ಚಿಕ್ಕಬಳ್ಳಾಪುರ ಮತ್ತು ರಾಮನಗರ ಜಿಲ್ಲೆಗಳು. |
| 2 | ಉಪ ಕಾರ್ಮಿಕ ಆಯುಕ್ತರು, ಪ್ರಾದೇಶಿಕ –2, ಬೆಂಗಳೂರು. | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ ಸಂಖ್ಯೆ<br>1, 2, 5 ರಿಂದ 7, 21 ರಿಂದ 33, 47 ರಿಂದ 60, 78 ರಿಂದ 92, 109 ರಲ್ಲಿ, ಅವಿನ್ಯೂ ರಸ್ತೆಯ ಚಿಕ್ಕಪೇಟೆ ಸರ್ಕಲ್ ನಿಂದ ಕೆಂಪೇಗೌಡ ರಸ್ತೆಯವರೆಗೆ, ಕೆಂಪೇಗೌಡ ರಸ್ತೆಯಿಂದ ಬಿ.ವಿ.ಕೆ.ರಸ್ತೆಯ ಮಹಾರಾಜಾ ಕಾಂಪ್ಲೆಕ್ಸ್ ವರೆಗೆ, ಬಿ.ವಿ.ಕೆ.ರಸ್ತೆಯಿಂದ ರಂಗಸ್ವಾಮಿಗುಡಿ ರಸ್ತೆಯವರೆಗೆ, ರಂಗಸ್ವಾಮಿಗುಡಿ ರಸ್ತೆಯಿಂದ ಬಳೇಪೇಟೆ ಮುಖ್ಯರಸ್ತೆಯ ಜೆ.ಎಂ.ಲೇನ್ 3ನೇ ಅಡ್ಡರಸ್ತೆಯ ಮೂಲಕ ಓ.ಟಿ.ಸಿ.ರಸ್ತೆಯಲ್ಲಿ ಮುಂದುವರೆದು ಭಾಷ್ಯಂ ರಸ್ತೆಯವರೆಗೆ, ಭಾಷ್ಯಂ ರಸ್ತೆಯಿಂದ ಸುಲ್ತಾನ್ ಪೇಟೆ ಮುಖ್ಯರಸ್ತೆಯವರೆಗೆ, ಸುಲ್ತಾನ್ ಪೇಟೆ ಮುಖ್ಯರಸ್ತೆಯಿಂದ ಎ.ಎಸ್.ಚಾರ್ ಸ್ಟ್ರೀಟ್ ನಲ್ಲಿ ಮುಂದುವರೆದು ಬಿ.ವಿ.ಕೆ. ಅಯ್ಯಂಗಾರ್ ರಸ್ತೆಯ ವೃತ್ತದವರೆಗೆ, ಬಿ.ವಿ.ಕೆ. ಅಯ್ಯಂಗಾರ್ ರಸ್ತೆಯ ವೃತ್ತದಿಂದ ಓ.ಟಿ.ಸಿ. ರಸ್ತೆಯಲ್ಲಿ ಮುಂದುವರೆದು ಅವಿನ್ಯೂ ರಸ್ತೆಯ ಚಿಕ್ಕಪೇಟೆ ವೃತ್ತದವರೆಗೆ, 110 ರಿಂದ 119, 138 ರಿಂದ 140, 142 ರಿಂದ 154, 171 ರಿಂದ 176, 188 ರಿಂದ 193, ಬೆಂಗಳೂರು ಪೂರ್ವ ತಾಲ್ಲೂಕಿನ ವರ್ತೂರು ಬಿದರಹಳ್ಳಿ ಹೋಬಳಿಗಳು, ಬೆಂಗಳೂರು ಉತ್ತರ ತಾಲ್ಲೂಕಿನ ಜಾಲ ಹೋಬಳಿ ಪ್ರದೇಶಗಳು, ಬೆಂಗಳೂರು ದಕ್ಷಿಣ ತಾಲ್ಲೂಕಿನ ಬೇಗೂರು ಹೋಬಳಿ ಮತ್ತು ದೇವನಹಳ್ಳಿ ತಾಲ್ಲೂಕು, ಹೊಸಕೋಟೆ ತಾಲ್ಲೂಕು. ಆನೇಕಲ್ ತಾಲ್ಲೂಕು ಹಾಗೂ ಕೋಲಾರ, ಮಂಡ್ಯ, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳು. |

| ಕ್ರ. ಸಂ. | ಅಧಿಕಾರಿಗಳ ವಿವರ ಮತ್ತು ಪದನಾಮ | ಕಾರ್ಯವ್ಯಾಪ್ತಿ |
|---|---|---|
| 3 | ಉಪ ಕಾರ್ಮಿಕ ಆಯುಕ್ತರು, ಬೆಳಗಾವಿ ಪ್ರಾದೇಶಿಕ, ಬೆಳಗಾವಿ. | ಬೆಳಗಾವಿ, ಬಿಜಾಪುರ, ಉತ್ತರಕನ್ನಡ, ಬಾಗಲಕೋಟೆ, ಧಾರವಾಡ, ಹಾವೇರಿ ಮತ್ತು ಗದಗ ಜಿಲ್ಲೆಗಳು. |
| 4 | ಉಪ ಕಾರ್ಮಿಕ ಆಯುಕ್ತರು, ಗುಲ್ಬರ್ಗಾ ಪ್ರಾದೇಶಿಕ, ಗುಲ್ಬರ್ಗಾ. | ಗುಲ್ಬರ್ಗಾ, ಬೀದರ್, ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ರಾಯಚೂರು, ಕೊಪ್ಪಳ ಮತ್ತು ಯಾದಗಿರಿ ಜಿಲ್ಲೆಗಳು. |
| 5 | ಉಪ ಕಾರ್ಮಿಕ ಆಯುಕ್ತರು, ಹಾಸನ ಪ್ರಾದೇಶಿಕ, ಹಾಸನ. | ಹಾಸನ, ಚಿಕ್ಕಮಗಳೂರು, ಕೊಡಗು, ಶಿವಮೊಗ್ಗ, ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – IV-A | ಬೆಂಗಳೂರು, ಮಂಗಳವಾರ, ಆಗಸ್ಟ್ ೬, ೨೦೧೩ (ಶ್ರಾವಣ ೧೫, ಶಕ ವರ್ಷ ೧೯೩೫) | ನಂ. ೧೦೩೩ |
|---|---|---|
| Part – IV-A | Bangalore, Tuesday, August 6, 2013 (Shravana 15, Shaka Varsha 1935) | No. 1033 |



## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 37 ಹೆಚ್‌ಹೆಚ್‌ಎಲ್ 2013, ಬೆಂಗಳೂರು, ದಿನಾಂಕ: 06–08–2013**

ದಿನಾಂಕ: 21–08–2013 ಬುಧವಾರದಂದು ಮಂಡ್ಯ ಮತ್ತು ಬೆಂಗಳೂರು ಗ್ರಾಮಾಂತರ ಲೋಕಸಭಾ ಕ್ಷೇತ್ರಗಳ ಚುನಾವಣೆ ನಡೆಯಲಿದ್ದು, ಈ ಲೋಕಸಭಾ ಕ್ಷೇತ್ರಗಳಲ್ಲಿನ ಎಲ್ಲಾ ಕೇಂದ್ರ ಹಾಗೂ ರಾಜ್ಯ ಸರ್ಕಾರಿ ಕಛೇರಿಗಳಿಗೆ, ಶಾಲಾ ಕಾಲೇಜುಗಳಿಗೆ, (ಅನುದಾನಿತ ಶಿಕ್ಷಣ ಸಂಸ್ಥೆಗಳು ಒಳಗೊಂಡಂತೆ) ಸರ್ಕಾರವು ಚುನಾವಣೆ ನಡೆಯುವ ದಿನಾಂಕ 21–08–2013 ರಂದು ಸಾರ್ವತ್ರಿಕ ರಜೆಯನ್ನು ಘೋಷಿಸಿದೆ. ಹಾಗೂ ಎಲ್ಲಾ ವ್ಯವಹಾರಿಕ ಸಂಸ್ಥೆಗಳು, ಔದ್ಯಮಿಕ ಸಂಸ್ಥೆಗಳು ಮತ್ತು ಇನ್ನಿತರ Establishment ಗಳಲ್ಲಿ ಖಾಯಂ ಆಗಿ ಅಥವಾ ದಿನಗೂಲಿ ಮೇಲೆ ಕೆಲಸ ನಿರ್ವಹಿಸುತ್ತಿರುವ ಎಲ್ಲಾ ನೌಕರರಿಗೆ ಮತದಾನ ಮಾಡಲು ಅನುಕೂಲವಾಗುವಂತೆ Negotiable Instruments Act 1881, ಕಲಂ 25 ರಡಿ ಮತ್ತು Representation of People Act, 1951 ಕಲಂ 135 ಬಿ ಅಡಿಯಲ್ಲಿ ವೇತನ ಸಹಿತ ರಜೆ ನೀಡಲು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ರಾಜ್ಯ ಶಿಷ್ಟಾಚಾರ–1)

# ವಿಶೇಷ ರಾಜ್ಯ ಪತ್ರಿಕೆ



| ಭಾಗ – III | ಬೆಂಗಳೂರು, ಬುಧವಾರ, ಆಗಸ್ಟ್ ೭, ೨೦೧೩ (ಶ್ರಾವಣ ೧೬, ಶಕ ವರ್ಷ ೧೯೩೫) | ನಂ. ೧೦೩೫ |
|---|---|---|
| Part – III | Bangalore, Wednesday, August 7, 2013 (Shravana 16, Shaka Varsha 1935) | No. 1035 |



## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 2 ಸೇಸಕಿ 13, ಬೆಂಗಳೂರು, ದಿನಾಂಕ: 07–08–2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 19–12–12ರ ಪತ್ರದಲ್ಲಿ ಶ್ರೀ ಗುರುಶಾಂತಪ್ಪ ಹೊಸಗೌಡರ್, ಸಹಾಯಕ ಇಂಜಿನಿಯರ್, ಇವರು ದಿನಾಂಕ 2–8–85 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು, 10 ವರ್ಷಗಳ ಸೇವೆ ಪೂರೈಸಿದ ನಂತರ ಅವರ ಸೇವೆಯನ್ನು ಸಂಖ್ಯೆ:ಪಿಡಬ್ಲ್ಯೂಡಿ:626: ಪಿಡಬ್ಲ್ಯೂಸಿ:96 ದಿನಾಂಕ 29–6–96 ರಲ್ಲಿ ದಿನಾಂಕ 2–8–95ರಿಂದ ಸಹಾಯಕ ಇಂಜಿನಿಯರ್

ಹುದ್ದೆಯಲ್ಲಿ ಸಕ್ರಮಾತಿ ಗೊಳಿಸಿದ್ದು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವಾದ ಕಾರಣ ಈಗ ಸದರಿಯವರ ಹೆಸರನ್ನು ದಿನಾಂಕ 15–11–2010ರ ಅಧಿಸೂಚನೆಯಲ್ಲಿ ಪ್ರಕಟಿಸಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ)ರವರ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಗುರುಶಾಂತಪ್ಪ ಹೊಸಗೌಡರ್,, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3451–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| **Ranking No** | **Previous AE. GRD No.** | **Name of the Engineer** | **SC/ ST** | **Date of Birth** | **Date of Entry into service** | **Date of Regular Appointment to the cadre** | **Re Mr ks** |
|---|---|---|---|---|---|---|---|
| **1** | **2** | **3** | **4** | **5** | **6** | **7** | **8** |
| 3451-A | - | GURUSHANTAPPA HOSAGOWDAR | | 04-07-61 | 02-08-85 | 02-08-95 | DWR |

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು/ಅಧಿಕಾರಿಗಳು ಅವರ ಆಕ್ಷೇಪಣೆ/ ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>**Part – III** | **ಬೆಂಗಳೂರು, ಬುಧವಾರ, ಆಗಸ್ಟ್ ೭, ೨೦೧೩ (ಶ್ರಾವಣ ೧೬, ಶಕ ವರ್ಷ ೧೯೩೫)**<br>**Bangalore, Wednesday, August 7, 2013 (Shravana 16, Shaka Varsha 1935)** | **ನಂ.೧೦೩೬**<br>**No. 1036** |
|---|---|---|

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಒಇ 186 ಪೊಸಿಪ 2013, ಬೆಂಗಳೂರು, ದಿನಾಂಕ: 06–08–2013**

ಅಧಿಸೂಚನೆ ಸಂಖ್ಯೆ: ಒಇ 186 ಪೊಸಿಪ 2013, ದಿನಾಂಕ: 18.5.2013ರಲ್ಲಿ ಡಿವೈಎಸ್‌ಪಿ (ನಿಸ್ತಂತು)ರವರುಗಳ ವೃಂದದಲ್ಲಿ 01.01.2013ಕ್ಕೆ ಅಂತ್ಯಗೊಂಡಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಈ ಕುರಿತಂತೆ ಯಾವುದಾದರೂ ಆಕ್ಷೇಪಣೆ ಅಥವಾ ಸಲಹೆಗಳೇನಾದರೂ ಇದ್ದಲ್ಲಿ ಅವುಗಳನ್ನು ಲಿಖಿತವಾಗಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ವಿಧಾನಸೌಧ, ಬೆಂಗಳೂರು–560001ರವರಿಗೆ ಈ ಅಧಿಸೂಚನೆ ಪ್ರಕಟವಾದ 30 ದಿನಗಳೊಳಗೆ ಸಲ್ಲಿಸುವಂತೆ ತಿಳಿಸಲಾಗಿತ್ತು. ನಿಗದಿತ ಅವಧಿಯಲ್ಲಿ ಬಂದಂತಹ ಸಲಹೆ / ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮಗೊಳಿಸಿದ ಜೇಷ್ಠತಾ ಪಟ್ಟಿಯನ್ನು ಅನುಬಂಧಕ್ಕೆ ಲಗತ್ತಿಸಿದಂತೆ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ದಿನಾಂಕ 01.01.2013ರಂದು ಇದ್ದಂತೆ ಡಿವೈಎಸ್‌ಪಿ (ನಿಸ್ತಂತು) ರವರುಗಳ ಅಂತಿಮ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರು | ಜನ್ಮ ದಿನಾಂಕ | ಡಿವೈಎಸ್‌ಪಿ (ನಿಸ್ತಂತು) ಹುದ್ದೆಗೆ ಮುಂಬಡ್ತಿ ಅರ್ಹತಾ ದಿನಾಂಕ | ಷರಾ |
|---|---|---|---|---|
| | ಎಸ್.ಬಿ. ಆವಂತಿ | 12.12.1950 | 27.10.2010 | ನಿವೃತ್ತಿ |
| 1. | ಆರ್. ವೆಂಕಟೇಶ್ | 26.3.1954 | 27.10.2010 | |
| 2. | ಎಲ್. ಚಂದ್ರಶೇಖರ್ | 25.09.1958 | 10.05.2011 | |
| | ವಿರೂಪಾಕ್ಷಯ್ಯ | 11.10.1951 | 10.05.2011 | ನಿವೃತ್ತಿ |
| | ಎಂ.ಎ. ಗಜಕೋಶ | 01.06.1952 | 04.01.2012 | ನಿವೃತ್ತಿ |
| 3. | ಎಂ. ವಿಜಯಕುಮಾರ್ | 01.06.1956 | 17.04.2012 | |
| 4. | ಎನ್.ಎ. ರಮೇಶ್‌ಕುಮಾರ | 10.11.1953 | 27.7.2012 | |

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59